# ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳಲ್ಲಿ ಕನ್ನಡ-ಕನ್ನಡಿಗರ ಪ್ರಶ್ನೆಗಳು

ಕನ್ನಡ ವಿಶ್ವವಿದ್ಯಾಲಯದ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ

ಸಂಶೋಧಕಿ
ಎಂ. ಪದ್ಮಶ್ರೀ

ಮಾರ್ಗದರ್ಶಕರು
ಡಾ. ಬಿ. ಎಂ. ಪುಟ್ಟಯ್ಯ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೭-೦೮

361

# ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳಲ್ಲಿ ಕನ್ನಡ-ಕನ್ನಡಿಗರ ಪ್ರಶ್ನೆಗಳು

ಕನ್ನಡ ವಿಶ್ವವಿದ್ಯಾಲಯದ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಸಲ್ಲಿಸಿದ ಎಂ.ಫಿಲ್. ಸಂಪ್ರಬಂಧ

ಸಂಶೋಧಕಿ
ಎಂ. ಪದ್ಮಶ್ರೀ




ಮಾರ್ಗದರ್ಶಕರು
ಡಾ. ಬಿ. ಎಂ. ಪುಟ್ಟಯ್ಯ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೭-೦೮

## ಸಂಶೋಧಕರ ಪ್ರಮಾಣ ಪತ್ರ

ನಾನು, 'ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳಲ್ಲಿ ಕನ್ನಡ-ಕನ್ನಡಿಗರ ಪ್ರಶ್ನೆಗಳು' ಎಂಬ ವಿಷಯ ಕುರಿತು, ಡಾ. ಬಿ. ಎಂ. ಪುಟ್ಟಯ್ಯ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಪ್ರಬಂಧವನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಬೇರೆ ಯಾವುದೇ ಪದವಿಗೆ ಸಲ್ಲಿಸಿಲ್ಲವೆಂದು ದೃಡೀಕರಿಸುತ್ತೇನೆ.

೨೪.೧೦.೦೮
ವಿದ್ಯಾರಣ್ಯ

ಎಂ. ಪದ್ಮಶ್ರೀ
ಸಂಶೋಧಕಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ಪ್ರಮಾಣ ಪತ್ರ

ಎಂ. ಪದ್ಮಶ್ರೀ ಇವರು, ನನ್ನ ಮಾರ್ಗದರ್ಶನದಲ್ಲಿ, 'ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳಲ್ಲಿ ಕನ್ನಡ-ಕನ್ನಡಿಗರ ಪ್ರಶ್ನೆಗಳು' ಎಂಬ ವಿಷಯ ಕುರಿತು, ಸಂಪ್ರಬಂಧ ಸಿದ್ಧಪಡಿಸಿದ್ದಾರೆ. ಎಂ.ಫಿಲ್. ಪದವಿಯ ಆಂಶಿಕ ಅಗತ್ಯಕ್ಕಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ, ಪ್ರಸ್ತುತ ಪ್ರಬಂಧವನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಬೇರೆ ಯಾವುದೇ ಪದವಿಗೆ ಸಲ್ಲಿಸಿಲ್ಲವೆಂದು ದೃಢೀಕರಿಸಲಾಗಿದೆ.

೨೪.೧೦.೦೮
ವಿದ್ಯಾರಣ್ಯ

ಡಾ. ಬಿ.ಎಂ. ಪುಟ್ಟಯ್ಯ
ರೀಡರ್
ಕನ್ನಡ ವಿಶ್ವವಿದ್ಯಾಲಯ

## ಪರಿವಿಡಿ




ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಅಧ್ಯಾಯ : ಒಂದು

### ಪ್ರಸ್ತಾವನೆ

೧೯೧೫ರಲ್ಲಿ ಆರಂಭಗೊಂಡಂತಹ ಕನ್ನಡ ಸಾಹಿತ್ಯ ಪರಿಷತ್ತು (ಮುಂಚೆ ಕರ್ಣಾಟಕ ಸಾಹಿತ್ಯ ಪರಿಷತ್ತು) ನಾಡು ನುಡಿ ಅಭಿವೃದ್ಧಿಯ ಬಗ್ಗೆ ಹಲವಾರು ಕಾರ್ಯಯೋಜನೆಗಳನ್ನು ಹಾಕಿಕೊಂಡಿದೆ. ಅಂತಹವುಗಳಲ್ಲಿ ಪ್ರಮುಖವಾದವು ಕನ್ನಡ ಸಾಹಿತ್ಯ ಸಮ್ಮೇಳನಗಳು. ಅಂದಿನಿಂದ ಪ್ರಾರಂಭಗೊಂಡಂತಹ ಈ ಕನ್ನಡ ಸಾಹಿತ್ಯ ಸಮ್ಮೇಳನಗಳು ಇಂದಿಗೂ ಸಾರ್ವಜನಿಕ ಜೀವನದಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ನಾಡು ನುಡಿಯ ಬಗ್ಗೆ ಅವುಗಳ ಅಭಿವೃದ್ದಿಯ ಬಗ್ಗೆ ಹಲವಾರು ವಿಷಯಗಳು ಸಾಹಿತ್ಯ ಸಮ್ಮೇಳನಗಳಲ್ಲಿ ಚರ್ಚಿತವಾಗಿವೆ ಮತ್ತು ಚರ್ಚಿತವಾಗುತ್ತಿವೆ.

ಕನ್ನಡ ಸಾಹಿತ್ಯ ಸಮ್ಮೇಳನಗಳ ಕೇಂದ್ರ ಬಿಂದುವಾದಂತಹ ಅಧ್ಯಕ್ಷೀಯ ಭಾಷಣಗಳಲ್ಲಿ ಇಂತಹ ಅನೇಕ ಅಂಶಗಳನ್ನು ವಿವರಿಸಿ, ವಿಶ್ಲೇಷಿಸುವುದರ ಮೂಲಕ ಮಂಡಿಸಲಾಗಿದೆ ಹಾಗೂ ಮಂಡಿಸಲಾಗುತ್ತಿದೆ. ಈ ಸಮ್ಮೇಳನಗಳಲ್ಲಿ 'ಕನ್ನಡ' ಮತ್ತು 'ಕನ್ನಡಿಗರ' ಬಗ್ಗೆ ಯಾವ ನೆಲೆಯಲ್ಲಿ ಚರ್ಚಿಸಿದ್ದಾರೆ ಮತ್ತು ಎಂತಹ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ ಎಂಬುದನ್ನು ನೋಡಬಹುದು/ದಾಗಿದೆ.

ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳ ಮೊದಲ ಮೂರು ಸಂಪುಟಗಳನ್ನು ಅನುಲಕ್ಷಿಸಿ (೪೭ ಭಾಷಣಗಳು) ಇಲ್ಲಿ ಅಧ್ಯಯನ ಮಾಡಲಾಗಿದೆ. ಇಲ್ಲಿಯವರೆಗಿನ ಈ ಭಾಷಣಗಳಲ್ಲಿ ಹಲವು ಅಂಶಗಳು ಪುನರಾವರ್ತನೆಗೊಂಡು ಒಂದು ರೀತಿಯ ಪರಂಪರೆಯನ್ನು ಸೃಷ್ಟಿಸಿವೆ. ಆದರೂ ಕೆಲವು ಅಧ್ಯಕ್ಷರ ಭಾಷಣಗಳು ಪಾಂಡಿತ್ಯ, ಅಭಿವ್ಯಕ್ತಿ ವಿಶಿಷ್ಟತೆಯಿಂದ, ವೈಚಾರಿಕತೆಯಿಂದ ಭಿನ್ನವಾದ ಅಂಶಗಳನ್ನು ಪ್ರಸ್ತಾಪಿಸಿರುವುದು ಕಾಣಬಹುದು.

ಅಧ್ಯಕ್ಷೀಯ ಭಾಷಣಗಳಲ್ಲಿ ಭಾಷೆಯನ್ನು ಕುರಿತು ಚಿಂತನೆ ಹೇಗೆ ಮೂಡಿಬಂದಿದೆ, ಭಾಷೆಯ ಪ್ರಾಚೀನತೆಯ ಬಗ್ಗೆ ಹಾಗೂ ಅದರ ಮಹತ್ವದ ಬಗ್ಗೆ ಯಾವ ಅಂಶಗಳನ್ನು ಚರ್ಚಿಸಲಾಗಿದೆ, ಯಾವ ರೀತಿಯ ಭಾಷೆಯ ಬಳಕೆ ಮತ್ತು ರಚನೆಯ ಬಗ್ಗೆ ಒತ್ತು ಕೊಡಲಾಗಿದೆ, ಶಿಕ್ಷಣ, ಆಡಳಿತ, ಸಮೂಹ ಮಾಧ್ಯಮ, ಚಲನಚಿತ್ರ, ನಾಟಕ ಇತ್ಯಾದಿಗಳಲ್ಲಿ ಎಂತಹ ಭಾಷೆ ಉಚಿತ ಎಂಬುದನ್ನು ಹೇಳಿದ್ದಾರೆ, ಭಾಷೆಯ ಹೇರಿಕೆ ಮತ್ತು ಬಳಕೆಯ ಬಗ್ಗೆ ಅವರ ನಿಲುವೇನು ಎಂಬ ಅಂಶಗಳನ್ನು ಇಲ್ಲಿ ಚರ್ಚಿಸಲಾಗುವುದು.

ಸಾಹಿತ್ಯ ಸಮ್ಮೇಳನಗಳಲ್ಲಿ ಹೆಚ್ಚಾಗಿ ಸಾಹಿತಿಗಳೇ ಅಧ್ಯಕ್ಷರಾಗಿದ್ದಾರೆ. ಈ ನಿಟ್ಟಿನಲ್ಲಿ ನೋಡುವುದಾದರೆ ಸಾಹಿತ್ಯ ಸೃಷ್ಟಿ, ಮುದ್ರಣ, ಅದರ ಪ್ರಸಾರ, ಅದು ಒಳಗೊಂಡಿರಬೇಕಾದ ವಸ್ತುವಿಷಯಗಳು, ಆಶಯಗಳು, ನಿರೂಪಣೆಯ ಕ್ರಮಗಳು, ಭಾಷಾ ಬಳಕೆಯ ಸಾಧ್ಯತೆಗಳು, ಸಾಹಿತ್ಯದ ವಿವಿಧ ಪ್ರಕಾರಗಳು ಈ ಕುರಿತು ಅಲ್ಲಿ ವ್ಯಕ್ತವಾಗಿರುವ ವಿಚಾರಗಳೇನು ಎಂಬುದನ್ನು ಅವಲೋಕನ ಮಾಡಲಾಗುವುದು. ಜೊತೆಗೆ ಕನ್ನಡ ಸಾಹಿತ್ಯದ ಸ್ಥಿತಿಗತಿಯ ಬಗ್ಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ, ಲೇಖಕ–ಓದುಗ–ವಿಮರ್ಶಕರ ಬಗೆಗಿನ ಅವರ ವಿಚಾರಗಳೇನು? ಸಾಹಿತ್ಯದ ಅಭಿವೃದ್ಧಿಗೆ ಅಧ್ಯಕ್ಷರುಗಳು ನೀಡುವ ಸಲಹೆ–ಸೂಚನೆಗಳು ಎಂತಹವು ಎಂಬುದನ್ನು ಸಾಹಿತ್ಯ ಕುರಿತು ಚಿಂತನೆ ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಚರಿತ್ರೆ ಮತ್ತು ಪರಂಪರೆಯನ್ನು ಕುರಿತು ಈ ಅಧ್ಯಕ್ಷೀಯ ಭಾಷಣಗಳು ಏನು ಹೇಳುತ್ತವೆ, ನಾಡಿನ ಚರಿತ್ರೆ ಅಥವಾ ಸಾಹಿತ್ಯದ ಚರಿತ್ರೆಯನ್ನು ಚರ್ಚಿಸುವಾಗ ಯಾವ ಅಂಶಗಳನ್ನು ಗಣನೆಗೆ ತೆಗೆದುಕೊಂಡಿದ್ದಾರೆ, ಚರಿತ್ರೆಯ ನಿರ್ಮಾಪಕರನ್ನಾಗಿ ಯಾರನ್ನು ನೋಡಲಾಗಿದೆ, ಸಾಹಿತ್ಯ ಚರಿತ್ರೆಯನ್ನು ಚರ್ಚಿಸುವಾಗ ಯಾವ ಮಾನದಂಡಗಳನ್ನು ಬಳಸಲಾಗಿದೆ ಇತ್ಯಾದಿ ಅಂಶಗಳನ್ನು ಚರಿತ್ರೆ ಕುರಿತ ಚಿಂತನೆ ಭಾಗದಲ್ಲಿ ಚರ್ಚಿಸಸಲಾಗಿದೆ.

ಇಂತಹ ಸಮ್ಮೇಳನಗಳ ಅಧ್ಯಕ್ಷೀಯ ಸ್ಥಾನವನ್ನು ನಾಡಿನ ಗಣ್ಯವ್ಯಕ್ತಿಗಳು, ಹಿರಿಯ ವ್ಯಕ್ತಿಗಳು, ಸಾಹಿತಿಗಳು ಅಲಂಕರಿಸಿದ್ದಾರೆ. ಸಾಹಿತ್ಯ ಸಮ್ಮೇಳನಗಳು ನಾಡಿನ ಒಟ್ಟಿಗೆ ಗಡಿಭಾಗದಲ್ಲಿ ಮತ್ತು ಹೊರನಾಡುಗಳಲ್ಲಿಯೂ ನಡೆಯುವುದರ ಮೂಲಕ ಆಯಾ ಪ್ರದೇಶದ/ಭಾಗದಲ್ಲಿನ ಕನ್ನಡದ ಮತ್ತು ಕನ್ನಡಿಗರ ಸ್ಥಿತಿಗತಿ ಮತ್ತು ಅಭಿವೃದ್ಧಿ ಯೋಜನೆಯ ಬಗ್ಗೆ ಚರ್ಚೆಯನ್ನು ಮಾಡಲಾಗಿದೆ /ಲಾಗುತ್ತಿದೆ.

ಈ ಅಧ್ಯಕ್ಷೀಯ ಭಾಷಣಗಳನ್ನು ಅವುಗಳ ಕಾಲದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಒತ್ತಡಗಳ ಹಿನ್ನೆಲೆಯಲ್ಲಿಯೂ ಗಮನಿಸಬೇಕಾಗಿದೆ. ಏಕೆಂದರೆ ಅಂದಿನ ಒತ್ತಡಗಳು ಸಹ ಈ ಭಾಷಣಗಳ ಮೂಲಕ ವ್ಯಕ್ತಗೊಂಡಿವೆ. ಇಲ್ಲಿ ಕನ್ನಡ ಮತ್ತು ಕನ್ನಡಿಗರು ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಅಧ್ಯಕ್ಷೀಯ ಭಾಷಣಗಳಲ್ಲಿ ಯಾವ ಅಂಶಗಳು ಕೇಂದ್ರಕ್ಕೆ ಬಂದಿವೆ ಎಂಬುದನ್ನು ಗಮನಿಸಿ, ಅಂಚಿಗೆ ಸರಿಸಲ್ಪಟ್ಟ ಅಂಶಗಳನ್ನು ಪ್ರಶ್ನೆಗಳನ್ನಾಗಿ ಮಾಡಿಕೊಳ್ಳಲಾಗಿದೆ.

ಅಧ್ಯಯನದ ಅನುಕೂಲಕ್ಕಾಗಿ ಬಿಡಿಬಿಡಿಯಾದ ಅಧ್ಯಾಯಗಳನ್ನು ಮಾಡಿಕೊಂಡು ಈ ಪ್ರಶ್ನೆಗಳನ್ನು ವಿವರವಾಗಿ ಚರ್ಚಿಸಲಾಗಿದೆ. ಅಧ್ಯಕ್ಷೀಯ ಭಾಷಣಗಳಲ್ಲಿ ಮೂಡಿಬಂದಿರುವ ಚಿಂತನೆ ಗಳು ಕನ್ನಡ ಮತ್ತು ಕನ್ನಡಿಗರ ಸ್ಥಿತಿಗತಿಗಳನ್ನು, ಅವುಗಳನ್ನು ಸುಧಾರಿಸಲು ನೀಡಿರುವ ಸಲಹೆ ಸೂಚನೆಗಳೇನು? ಅವು ಕಾರ್ಯಗತವಾಗುವಲ್ಲಿ ಯಶಸ್ವಿಯಾಗಿವೆಯೆ ಎಂಬುದನ್ನು ಚರ್ಚಿಸಲಾಗಿದೆ. ಕೆಲವು ಅಧ್ಯಕ್ಷೀಯ ಭಾಷಣಗಳಲ್ಲಂತೂ ವಿಷಯಗಳ ಪುನರಾವರ್ತನೆಗೊಳ್ಳುವುದರ ಮೂಲಕ ಒಂದು ಪರಂಪರೆಯನ್ನೇ ಸೃಷ್ಟಿಸಿಕೊಂಡಿರುವುದು ಕಂಡುಬರುತ್ತದೆ. ಚರಿತ್ರೆ ಮತ್ತು ಪರಂಪರೆಯನ್ನು ಅದು ಇದ್ದ ಹಾಗೆಯೇ ಮುಂದುವರೆಸಿಕೊಂಡು ಹೋಗಬೇಕೆನ್ನುತ್ತಾರೋ ಅಥವಾ ಏನಾದರೂ ಬದಲಾವಣೆಗಳನ್ನು ಸೂಚಿಸುತ್ತಾರೋ ಎಂಬುದನ್ನು ಅರಿಯಬಹುದಾಗಿದೆ.

ಸಾಹಿತ್ಯ ಸಮ್ಮೇಳನಗಳು ಸಾಮಾನ್ಯವಾಗಿ ನಾಡಿನ ಒಳಭಾಗ ಮತ್ತು ಹೊರನಾಡುಗಳಲ್ಲಿ ಜರುಗುತ್ತಾ ಬಂದಿವೆ. ಈ ಸಂದರ್ಭದಲ್ಲಿ ಆಯಾ ಭಾಗದ ಕನ್ನಡಿಗರ ಸಮಸ್ಯೆಗಳನ್ನು ಅಧ್ಯಕ್ಷೀಯ ಭಾಷಣಗಳಲ್ಲಿ ಹೇಗೆ ಪರಿಗಣಿಸಿದ್ದಾರೆ? ಗಡಿನಾಡ ಮತ್ತು ಹೊರನಾಡ ಕನ್ನಡಿಗರ ಸ್ಥಿತಿಗತಿ ಏನು? ಇಂತಹ ಸಮಸ್ಯೆಗಳಿಗೆ ಯಾವ ರೀತಿಯ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ, ಈಗಲೂ ಕೂಡ ಇಂತಹ ಹಲವಾರು ಸಮಸ್ಯೆಗಳು ಜೀವಂತವಾಗಿವೆ. ಅನೇಕ ಸಂಘರ್ಷಗಳಿಗೆ ಕಾರಣವಾಗಿವೆ.

ಅಧ್ಯಕ್ಷೀಯ ಭಾಷಣಗಳಲ್ಲಿ ಈ ಎಲ್ಲಾ ಅಂಶಗಳನ್ನೊಳಗೊಂಡ ಸಮಸ್ಯೆಗಳಿಗೆ ನಾಡು ನುಡಿಯ ಅಭಿವೃದ್ಧಿಯ ಬಗ್ಗೆ ಯಾವ ರೀತಿಯ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಅವುಗಳು ಕಾರ್ಯಗತವಾಗುವಲ್ಲಿ ಯಶಸ್ವಿಯಾಗಿವೆಯೇ ಎಂಬುದನ್ನು ಸಲಹೆ ಸೂಚನೆಗಳು (ಮಾಡಬೇಕಾ ದುದೇನು) ಎಂಬ ವಿಷಯ

ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳನ್ನು (ಮೊದಲ ಮೂರು ಸಂಪುಟಗಳನ್ನು) ಮಾತ್ರ ಆಯ್ಕೆ ಮಾಡಿಕೊಂಡು ಚರ್ಚಿಸಲಾಗಿದೆ. ಆ ಮೂಲಕ ಅವುಗಳಲ್ಲಿ ಕನ್ನಡ-ಕನ್ನಡಿಗರ ಕುರಿತು ಯಾವ ರೀತಿಯ ಚರ್ಚೆಗಳು ಮೂಡಿಬಂದಿವೆ ಎಂಬುದನ್ನು ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಕನ್ನಡ-ಕನ್ನಡಿಗರ ಪ್ರಶ್ನೆಗಳು**

ಈ ಅಧ್ಯಯನದಲ್ಲಿ ಆಯ್ದುಕೊಂಡಿರುವ ಕನ್ನಡ ಮತ್ತು ಕನ್ನಡಿಗರು ಎನ್ನುವ ಪರಿಕಲ್ಪನೆಯನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಅದಕ್ಕೂ ಮುಂಚೆ ಕೆಲವು ವ್ಯಾಖ್ಯಾನಗಳನ್ನು ಗಮನಿಸಬಹುದು. 'ಭಾಷಿಕ ಆಧಾರವಾಗಿ ಹೇಳುವುದಾದರೆ ಕನ್ನಡ ಮಾತನಾಡುವವರು ಮತ್ತು ಭೌಗೋಳಿಕ ಆಧಾರವಾಗಿ ಹೇಳುವುದಾದರೆ ಕರ್ನಾಟಕದಲ್ಲಿ ನೆಲೆಸಿರುವವನು ಕನ್ನಡಿಗ'.[೧] 'ಕನ್ನಡ ಮತ್ತು ಕರ್ನಾಟಕಗಳನ್ನು ಬಿಗಿದು ಕಟ್ಟು ನಿರ್ಧಾರ ರಾಜಕೀಯ ನೆಲೆಯದ್ದು. ಈ ಕಾರಣದಿಂದಾಗಿ ಕನ್ನಡ ಎನ್ನುವುದು ಭಾಷಾ ವಾಚಿ, ಕನ್ನಡಿಗ ಎಂಬುದು ವ್ಯಕ್ತಿ ಇಲ್ಲವೆ ಸಮೂಹ ವಾಚಿ, ಕನಾಟಕ ಎನ್ನುವುದು ದೇಶವಾಚಿ'.[೨] 'ಕರ್ನಾಟಕವನ್ನು ಉಳಿಸಿದವನೆ ಕನ್ನಡಿಗ'.[೩] 'ಸರೋಜಿನಿ ಮಹಿಷಿ ವರದಿಯವರು ಹಿಂದೆ ಸರ್ಕಾರಕ್ಕೆ ಕೊಟ್ಟಿರುವ ತಮ್ಮ ನೇತೃತ್ವದ ಸಮಿತಿಯ ವರದಿಯನ್ನು - ೧೫ ವರುಷಗಳ ಕಾಲ ನಮ್ಮ ರಾಜ್ಯದಲ್ಲಿ ವಾಸಿಸಿದ್ದು, ಕನ್ನಡವನ್ನು ಓದಲು ಬರೆಯಲು ಬರುವವರೆಲ್ಲ ಕನ್ನಡಿಗರು'.[೪] 'ಕರ್ನಾಟಕದಲ್ಲಿ ಬಹಳಷ್ಟು ಜನರ ಮನೆಯ ಮಾತು ಕನ್ನಡವಲ್ಲ. ಆದರೂ ಅವರು ಕರ್ನಾಟಕದಲ್ಲಿ ವಾಸ ಮಾಡುತ್ತಿರುವ ಕಾರಣದಿಂದಾಗಿ ಕನ್ನಡಿಗರೇ ಆಗಿದ್ದಾರೆ'.[೫] 'ಕನ್ನಡ ಕನ್ನಡಿಗ ಮುಂತಾದ ಪದಗಳನ್ನು ಸಮಾಜದಲ್ಲಿ ಬಹುತೇಕ ಉಪಭೋಗಿ ವಲಯಕ್ಕೆ ಅಥವ ನಲಿವವರ ವಲಯಕ್ಕೆ ಬಳಸಲಾಗುತ್ತಿದೆ. ಕನ್ನಡ ಭಾಷೆ ರಚನೆಯ ದೃಷ್ಟಿಯಿಂದ ಇರುವುದು ಒಂದೆ. ಆದರೆ ಅದರ ಬಳಕೆಯ ದೃಷ್ಟಿಯಿಂದ ನೋಡಿದರೆ ಅದು ಒಂದೆ ಅಲ್ಲ. ಹಲವು'.[೬]

ಈ ಮೇಲಿನ ಭಾಗಶಃ ವ್ಯಾಖ್ಯಾನಗಳನ್ನು ಗಮನಿಸಿದಾಗ, ಕನ್ನಡ ಎನ್ನುವುದು ಭಾಷಾ ವಾಚಿಕವಾಗಿ ಮತ್ತು ಕನ್ನಡಿ/ಕನ್ನಡಿಗರು ಎಂದರೆ ಕನ್ನಡ ಭಾಷೆಯನ್ನು ಮಾತನಾಡುವವರು, ಭೌಗೋಳಿಕವಾಗಿ ಕರ್ನಾಟಕದ ಎಲ್ಲೆಯೊಳಗೆ ಜೀವಿಸುತ್ತಿರುವವರು ಎಂಬಂತೆ ಸ್ಪಷ್ಟಪಡಸುವುದವುನ್ನು ಕಾಣುತ್ತೇವೆ. ಹಾಗಾದರೆ ಕರ್ನಾಟಕದ ಎಲ್ಲೆಯೊಳಗೆ ಇರುವವರು ಮಾತ್ರ ಕನ್ನಡಿಗರೆ? ಗಡಿಯಾಚೆ, ಹೊರನಾಡುಗಳಲ್ಲಿ ವಾಸಿಸುವವರು ಕನ್ನಡಿಗರಲ್ಲವೆ? ಆಗ ಅವರನ್ನು 'ಗಡಿನಾಡ, ಹೊರನಾಡ ಎನ್ನುವ ಪದಗಳ ಜೊತೆಗೂಡಿದ ಕನ್ನಡಿಗರು ಎಂದು ಪರಿಗಣಿಸಲಾಗುತ್ತದೆ. ಒಟ್ಟಿನಲ್ಲಿ ಕನ್ನಡಿಗರು ಎಂಬ ಕಲ್ಪನೆಯು ನೈತಿಕವಾಗಿ ಒಂದು ನಿರ್ದಿಷ್ಟ ಪ್ರದೇಶಕ್ಕಾಗಲಿ, ನಿರ್ದಿಷ್ಟ ಮಾತೃಭಾಷೆಗಾಗಲಿ ಸೀಮಿತವಾಗುವುದಿಲ್ಲ'.[೭] ಕೇವಲ ಮಾತೃಭಾಷೆಯ ಆಧಾರದ ಮೇಲೆ ಕನ್ನಡಿಗರು ಎನ್ನುವುದಾದರೆ, ಕನ್ನಡ ಮಾತೃಭಾಷೆಯಲ್ಲದ ಅದೆಷ್ಟೊ ಜನರು ಕನ್ನಡ ಮನಸ್ಸುಳ್ಳವರಾಗಿ, ಕನ್ನಡಕ್ಕೆ ಸೇವೆಯನ್ನು ಸಲ್ಲಿಸಿದ್ದಾರೆ/ಸಲ್ಲಿಸುತ್ತಿದ್ದಾರೆ. ಕನ್ನಡ ಎನ್ನುವುದು ಭಾಷಾವಾಚಿಯಾಗಿ, ಅದನ್ನಾಡುವ ಜನರನ್ನು ಕನ್ನಡಿಗರು ಎಂದು ಗುರುತಿಸುವಲ್ಲಿ ಒಂದು ಮಾನದಂಡವಾಗಿ ಬಳಕೆಯಾಗುತ್ತಿರುವುದು ಕಾಣಬಹುದು. ಅಂತೆಯೇ ಕರ್ನಾಟಕದಲ್ಲಿರುವ ಸಮಸ್ತ ಪ್ರಜೆಗಳನ್ನು ಕನ್ನಡಿಗರು ಎಂದು ಗುರುತಿಸುವಂತೆ ಒಪ್ಪಿಸಲಾಗಿದೆ. ಉದಾಹರಣೆಗೆ, ಸರೋಜಿನಿ ಮಹಿಷಿ ವರದಿಯ ಪ್ರಕಾರ ಕರ್ನಾಟಕದಲ್ಲಿದ್ದವರು ಮತ್ತು

ಕನ್ನಡ ಓದಲು, ಬರೆಯಲು ಬರುವವರೆಲ್ಲ ಕನ್ನಡಿಗರು ಎನ್ನುವುದಾದರೆ ೧೫ ವರುಷಗಳ ಕಾಲ ಕರ್ನಾಟಕದಲ್ಲೆ ಇದ್ದು ಜೀವನ ನಡೆಸುವ ಎಲ್ಲರೂ ಕನ್ನಡವನ್ನು ಓದಲು, ಬರೆಯಲು ಬಲ್ಲವರಾಗಿರುವುದಿಲ್ಲ. ಆದರೂ ಕನ್ನಡವನ್ನು ಮಾತನಾಡುತ್ತಿರುತ್ತಾರೆ/ಬಳಸುತ್ತಿರುತ್ತಾರೆ. ಹಾಗಾದರೆ ಅವರನ್ನು ಕನ್ನಡಿಗರು ಅಲ್ಲ ಎಂದು ಹೇಳಲಿಕ್ಕಾಗುತ್ತದೆಯೇ? 'ಮನೆಯಲ್ಲಿ ಆಡುವ ಮಾತೃಭಾಷೆಯನ್ನು ಮೀರಿ ಕನ್ನಡ ಭಾಷೆಯಲ್ಲಿ ವ್ಯವಹರಿಸುವ, ಅಭಿವ್ಯಕ್ತಿಸುವ ಜನರೆಲ್ಲ ಕನ್ನಡಿಗರೇ ಆಗಿರುತ್ತಾರೆ. ಆದ್ದರಿಂದ ಕನ್ನಡಿಗರು ಎಂಬ ಕಲ್ಪನೆಗೆ ಮಾತೃಭಾಷೆ ಮಾತ್ರವೇ ಮೂಲಾಧಾರವಲ್ಲ. ಅದು ಒಂದು ಮಾನದಂಡ ಮಾತ್ರ'[೮] ಎನ್ನುವ ಬರಗೂರರ ಮಾತನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಬಹುತೇಕ ವ್ಯಾಖ್ಯಾನಗಳು ಕನ್ನಡ ಇರುವುದು ಒಂದು ಭಾಷೆ ಎನ್ನುವಂತೆ ನೋಡಲಾಗಿದೆ. ಆದರೆ ಅದು ಒಂದೇ ಅಲ್ಲ. ಹಲವು. ಇಂತಹ ಹಲವುಗಳನ್ನು ಸೇರಿಸಿ ಒಂದೇ ಎನ್ನಲಾಗುತ್ತಿದೆ, ಎನ್ನಬೇಕು. ಇದನ್ನೆ ಕನ್ನಡಾಭಿಮಾನ ಎನ್ನುವಂತೆ ಪರಿಗಣಿಸಲಾಗುತ್ತಿದೆ. ಕನ್ನಡಿಗ ಎನ್ನುವುದು ಅಷ್ಟೆ. ಮೇಲ್ನೋಟಕ್ಕೆ ಸಮಾನತೆಯನ್ನು ಸಾರುವ ಪದದಂತೆ ಕಂಡುಬರುತ್ತದೆ. ಆದರೆ ಕನ್ನಡಿಗರಲ್ಲಿಯೇ ಇರುವ ಅಸಮಾನತೆಯನ್ನು ಇದು ಮುಚ್ಚಿಹಾಕಿದೆ. ಕನ್ನಡವೆಂದರೆ ಕೇವಲ ಭಾಷಾವಾಚಿ ಮಾತ್ರವಲ್ಲ. ಅದು ಭಾವ, ಬುದ್ಧಿ, ಬದುಕು. ಈ ಪ್ರಜ್ಞೆಯುಳ್ಳ ಪ್ರತಿಯೊಬ್ಬರೂ ಕನ್ನಡಿಗರು. ಈ ಪ್ರಜ್ಞೆಯು ಪ್ರತಿಯೊಂದು ವಲಯದಲ್ಲಿಯೂ ಪರಿಸರ, ಕಾಲಮಾನಕ್ಕೆ ತಕ್ಕಂತೆ ಅನುಸರಿಸುತ್ತ, ಅನುಸಂಧಾನಗೊಳ್ಳುತ್ತ ಮುಂದುವರಿಯುತ್ತಲೆ ಹೋಗುತ್ತಿರುತ್ತದೆ. 'ಅದು ಅಮೂರ್ತವಾದುದು. ಅದನ್ನು ಮೂರ್ತಗೊಳಿಸಲು ಹಲವಾರು ಹಾದಿಗಳನ್ನು ಹಿಡಿಯಲಾಗುತ್ತಿದೆ'[೯] ಎನ್ನುವ ಮಾತು ಕೂಡ ಅಷ್ಟೆ ಸತ್ಯವಾಗಿದೆ.

ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಡೆಸುವುದರ ಹಿಂದೆಯೂ ಸಹ ಇಂತಹ ಪ್ರಜ್ಞೆಯು ಕಾರ್ಯೋನ್ಮುಖಗೊಂಡಿದೆ ಎನ್ನಬಹುದು. ಅವುಗಳನ್ನು ಅಧ್ಯಕ್ಷರು ಹಲವು ವಿಧಗಳಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿದ್ದಾರೆ. ಭಾಷೆ, ಸಾಹಿತ್ಯ, ಚರಿತ್ರೆ, ಶಿಕ್ಷಣ, ಏಕೀಕರಣ, ಕನ್ನಡಾಭಿಮಾನ, ಹೊರ/ಗಡಿಭಾಗದ ಕನ್ನಡಿಗರು ಇತ್ಯಾದಿಯಾಗಿ. ಅವರ ಈ ಪ್ರಯತ್ನದಲ್ಲಿ ಕನ್ನಡ, ಕನ್ನಡಿಗರು ಎನ್ನುವ ಮಾನದಂಡ ಬಳಸಿ ಹೇಗೆ ಚರ್ಚಿಸಿದ್ದಾರೆ ಎನ್ನುವುದೇ ಈ ಅಧ್ಯಯನದ ಉದ್ದೇಶವಾಗಿದೆ.

## ಅಡಿಟಿಪ್ಪಣಿಗಳು

೧. ಪು.ಸಂ. ೧೫೨, ಸಂ.೩

೨. ಪು.ಸಂ. ೨೭೦, ಕನ್ನಡ ಜಗತ್ತು: ಅರ್ಧಶತಮಾನ

೩. ಪು.ಸಂ. ೬೦, ನಾಡು – ನುಡಿ

೪. ಪು.ಸಂ. ೨, ಕನ್ನಡ ಪ್ರಜ್ಞೆ

೫. ಪು.ಸಂ. ೫೦, ಕನ್ನಡ ಸಂಶೋಧನೆಯ ತಾತ್ವಿಕ ವಿಚಾರ

೬. ಪು.ಸಂ. ೬, ಕನ್ನಡ ಅಭಿಮಾನ: ಸಾಮಾಜಿಕ ಆಯಾಮಗಳು

೭. ಪು.ಸಂ. ೩, ಕನ್ನಡ ಪ್ರಜ್ಞೆ

೮. ಪು.ಸಂ. ೩, ಕನ್ನಡ ಪ್ರಜ್ಞೆ

೯. ಪು.ಸಂ. ೨೭೦, ಕನ್ನಡ ಜಗತ್ತು: ಅರ್ಧಶತಮಾನ

**ಅಧ್ಯಾಯ : ಎರಡು**

## ಭಾಷೆಯನ್ನು ಕುರಿತ ಚಿಂತನೆ

ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳಲ್ಲಿ ಅನೇಕ ವಿಷಯಗಳು ಚರ್ಚಿತ ಗೊಂಡಿವೆ. ಅವುಗಳಲ್ಲಿ ಒಂದು ಭಾಷೆ. ಭಾಷೆಯು ಸಾವಿರಾರು ವರ್ಷಗಳಿಂದಲೂ ಮನುಷ್ಯನ ಸಂಪರ್ಕ ಮಾಧ್ಯಮದ ಮೂಲ ಸಾಧನವಾಗಿದೆ. ಮಾನವನ ವಿಕಾಸ ಮೂಡಿಬಂದಿರುವುದೇ ಭಾಷೆಯ ಮೂಲಕ. ತನ್ನ ಎಲ್ಲಾ ಭಾವನೆಗಳನ್ನು, ಅನುಭವಗಳನ್ನು ಇನ್ನೊಬ್ಬರ ಹತ್ತಿರ ಹಂಚಿಕೊಳ್ಳು ವುದರ ಮೂಲಕ ಸಮಾಜದ ಎಲ್ಲಾ ವ್ಯವಹಾರಗಳಿಗೂ ಸಂಪರ್ಕ ಕೊಂಡಿಯಾಗಿದೆ. ಭಾಷೆಗೆ ಸಂಸ್ಕಾರವನ್ನು ಕೊಡುವುದರ ಮೂಲಕ ಎಲ್ಲಾ ತುಡಿತಗಳನ್ನು ಬಿಕ್ಕಟ್ಟುಗಳನ್ನು ತನ್ನೊಳಗೆ ಮಾಡಿಕೊಂಡು ಜೀವಂತವಾಗುತ್ತಾ ಹೋಗುತ್ತದೆ. ಹೀಗೆ ಭಾಷೆ ಎಂಬುದು ಮನುಷ್ಯನ ಉಸಿರಿನಷ್ಟೇ ಸಮಾಜಕ್ಕೆ ಅವಶ್ಯಕವಾಗಿದೆ.

ಸಾಹಿತ್ಯ ಸಮ್ಮೇಳನಗಳ ಭಾಷಣಗಳಲ್ಲಿ ಕನ್ನಡ ಭಾಷೆಯನ್ನು ಕುರಿತಾಗಿ ಅದರ ಉಗಮದ ಬಗ್ಗೆ ಅದರ ಪ್ರಾಚೀನತೆಯ ಬಗ್ಗೆ, ಬೇರೆ ಭಾಷೆಗಳೊಂದಿಗೆ ಸಂಬಂಧದ ಬಗ್ಗೆ ಹಲವಾರು ಅಂಶಗ ಳನ್ನು ಚರ್ಚೆ ಮಾಡಿದ್ದಾರೆ. ಈ ಮೂಲಕ ನೋಡುವುದಾದರೆ ಕನ್ನಡ ಭಾಷೆಯ ಬಗೆಗಿನ ಅವರ ನಿಲುವುಗಳೇನು ಇದ್ದವು ಭಾಷೆಯ ಬೆಳವಣಿಗೆಗೆ ಅವರು ನೀಡುವ ಸೂಚನೆ ಸಲಹೆಗಳೇನು? ಇತ್ಯಾದಿಯಾಗಿ ಚರ್ಚೆ ಮಾಡಲು ಹೊಸ ಆಯಾಮವನ್ನು ಒದಗಿಸುತ್ತವೆ. ಈ ಅಧ್ಯಕ್ಷೀಯ ಭಾಷಣಗಳು ಪ್ರಸ್ತುತ ಕನ್ನಡ ಭಾಷೆಯು ಸಂಸ್ಕೃತದಿಂದ ಹುಟ್ಟಿದ್ದು ಎಂಬ ವಿಚಾರವನ್ನು ಯಾರು ಯಾರು ಹೇಗೆ ಏನು ಹೇಳಿದ್ದಾರೆ ಎಂಬುದನ್ನು ತಿಳಿಯುವುದರ ಮೂಲಕ ಚರ್ಚೆಯನ್ನು ಬೆಳೆಸಬಹುದಾಗಿದೆ.

### ೧. ಕನ್ನಡ ಭಾಷೆಯ ಪ್ರಾಚೀನತೆ

ಭಾರತೀಯ ಭಾಷೆಗಳಲ್ಲಿ ಅತ್ಯಂತ ಪುರಾತನವಾದ ಭಾಷೆಯೆಂದರೆ ಸಂಸ್ಕೃತ ಭಾಷೆ. ನಂತರ ಸ್ಥಾನ ತಮಿಳು, ಮೂರನೆಯದು ನಮ್ಮ ಕನ್ನಡ ಭಾಷೆ. ಕನ್ನಡ ಭಾಷೆಗೆ ತನ್ನದೆ ಆದಂತಹ ಒಂದು ಇತಿಹಾಸ ಇದೆ ಪರಂಪರೆಯಿದೆ ಕನ್ನಡ ಭಾಷೆಯ ಪ್ರಾಚೀನತೆಯನ್ನು ತಿಳಿಯಲು ಆಕರವಾಗಿರುವಂತಹವು ಸಾಹಿತ್ಯ ಕೃತಿಗಳು ಮತ್ತು ಶಾಸನಗಳು. ಯಾವುದೇ ಭಾಷೆಯು ಸಾಹಿತ್ಯ ಮಟ್ಟಕ್ಕೇರಬೇಕೆಂದರೆ ಅದು ಹುಟ್ಟಿ ಬಹಳ ಕಾಲವಾಗಿರಬೇಕು ಅಂದಾಗ ಮಾತ್ರ ಸಂಸ್ಕಾರಗೊಂಡು ಅದು ಸಾಹಿತ್ಯ ಮಟ್ಟಕ್ಕೇರಲು ಸಾಧ್ಯ ಎಂಬ ವಾದವಿದೆ. ಅಂತೆಯೇ ಕನ್ನಡ ಭಾಷೆಯ ಪ್ರಾಚೀನತೆಯನ್ನು ಉಪಲಬ್ಧ ಗ್ರಂಥವಾದ ಕವಿರಾಜಮಾರ್ಗ ಕೃತಿಯ ಮೂಲಕ ಗುರುತಿಸಲಾಗುತ್ತಿದೆ. ಈ ಕೃತಿ ರಚನೆಯ ಕಾಲಕ್ಕಾಗಲೇ ಭಾಷೆಯು ಸಮೃದ್ಧವಾಗಿ ಬೆಳೆದು ಬಂದಿರುವುದನ್ನು ಗುರುತಿಸಬಹುದಾಗಿದೆ. ಆದರೆ ಕವಿರಾಜಮಾರ್ಗಕ್ಕಿಂತ ಪೂರ್ವದಲ್ಲಿಯೇ ರಚಿತವಾದ ಹಲ್ಮಿಡಿ ಶಾಸನದಲ್ಲಿಯೂ ಕನ್ನಡ ಭಾಷೆಯನ್ನು ಕಾಣಬಹುದಾಗಿದೆ. ಅಲ್ಲದೇ ಬೇರೆ ಭಾಷೆಯ ಸಾಹಿತ್ಯ ಕೃತಿಗಳಲ್ಲಿಯೂ ಕನ್ನಡ ನಾಡಿನ ಕನ್ನಡದ ಬಗ್ಗೆ ಮಾಹಿತಿಗಳು ದೊರೆಯುತ್ತವೆ.

'ತಮಿಳು ಭಾಷೆಯಲ್ಲಿರುವ 'ಅಗನಾನೂರು' ಎಂಬ ಕವಿಸೂಕ್ತಿ ೨ನೇ ಶತಮಾನದಲ್ಲಿ 'ಮಾಮೂಲನಾರ್' ಎಂಬ ಕವಿಯ ಉಕ್ತಿಯಾದ ೧೧೫ನೆಯ ಪದ್ಯದಲ್ಲಿ ಎರುಮೈ ನಾಡು

(ಎರುಮೈ=ಮಹಿಷ) ಎಂಬ ಹೆಸರನ್ನು ಹೇಳಿ ಇದು ಪಶ್ಚಿಮ ಪ್ರಾಂತದಲ್ಲಿ ಬರುತ್ತದೆ ಎಂದು ಹೇಳಿದೆ'.[೧] ತಮಿಳಿನ ಮತ್ತೊಂದು ಕೃತಿ 'ಶಿಲಪ್ಪಾದಿಕಾರಂ'ನಲ್ಲಿ ನಕ್ಕೀರರ್ ಎಂಬ ಕವಿಯ ಕೆಲ ಪದ್ಯಗಳಲ್ಲಿ ಕನ್ನಡ ನಾಡಿನ ಚಿತ್ರಗಳು ದೊರೆಯುತ್ತವೆ. ಜೈನ ಗ್ರಂಥಗಳಲ್ಲಿ ಆಂಧ್ರ ಭತ್ಯರ ಕಾಲದಲ್ಲಿ, ಚಿತ್ರದುರ್ಗದಲ್ಲಿ ದೊರೆತ ಕೆಲವು ನಾಣ್ಯಗಳಲ್ಲಿ ಕೆಲವು ಕನ್ನಡದ ಹೆಸರುಗಳು ದೊರೆಯುತ್ತವೆ. ಈಜಿಪ್ಟ್ ದೇಶದ ಆಕ್ಸರಿಂಕಸ್ ಎಂಬ ಸ್ಥಳದಲ್ಲಿ ದೊರೆತ ೨ನೇ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ್ ನಾಟಕದಲ್ಲಿ ಕನ್ನಡ ಶಬ್ಧಗಳು, ವಾಕ್ಯಗಳು ದೊರೆಯುತ್ತವೆ. ಉದಾ: ಪಾನಂ ಬೆರೆತ್ತಿ ಕಟ್ಟಿ ಮದುಮ ಬೇರೆತ್ತುವೆ'.[೨]

ಹೀಗೆ ಕವಿರಾಜಮಾರ್ಗ ಪೂರ್ವದಲ್ಲಿಯೇ ಕನ್ನಡ ನಾಡು ಮತ್ತು ಭಾಷೆಯ ಬಗ್ಗೆ ಮಾಹಿತಿಗಳು ದೊರೆಯುತ್ತವೆ. ಈ ಆಧಾರದ ಮೂಲಕ ಕನ್ನಡ ಭಾಷೆಯ ಪ್ರಾಚೀನತೆಯನ್ನು ಆ ಕಾಲಕ್ಕೆ ಕೊಂಡೊಯ್ಯಬಹುದು. ಆದರೆ ಕನ್ನಡ ಭಾಷೆಗೆ / ಸಾಹಿತ್ಯಕ್ಕೆ ಒಂದು ಅಧಿಕೃತತೆಯನ್ನು ತಂದುಕೊಟ್ಟಿರುವ ಆಧಾರಗಳೆಂದರೆ ಕವಿರಾಜಮಾರ್ಗ ಮತ್ತು ಹಲ್ಮಿಡಿ ಶಾಸನ, ಕವಿರಾಜಮಾರ್ಗಕಾರ ತನಗಿಂತಲೂ ಹಿಂದೆ ಇರುವ ಗ್ರಂಥ ರಚನಾಕಾರನಾದ ದುರ್ವಿನೀತನ ಹೆಸರನ್ನು ಪ್ರಸ್ತಾಪಿಸುತ್ತಾನೆ. ಅಂದರೆ ತನಗಿಂತಲೂ ಪೂರ್ವದಲ್ಲಿ ಗ್ರಂಥ ರಚನಾ ಕಾರ್ಯ ನಡೆದಿತ್ತು, ಭಾಷೆಯು ಸಮೃದ್ಧವಾಗಿ ಬೆಳೆದಿತ್ತು ಎಂಬುದನ್ನು ಗುರುತಿಸುತ್ತಾನೆ. ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡ ಪ್ರದೇಶವು ವ್ಯಾಪಿಸಿದ್ದು ಅಲ್ಲೆಲ್ಲಾ ಕನ್ನಡ ಭಾಷೆಯೇ ಪ್ರಚಲಿತದಲ್ಲಿದ್ದುದು ತಿಳಿದುಬರುತ್ತದೆ. 'ಕವಿರಾಜಮಾರ್ಗದ ನಂತರ ಜೈನ, ವೀರಶೈವ, ಬ್ರಾಹ್ಮಣ ಕವಿಗಳು ಕಾವ್ಯ ರಚನೆ ಮಾಡಿದರು, ಕನ್ನಡ ಭಾಷೆಯ ಹೆದ್ದೊರೆಯಾಗಿ ಹರಿದು ಬಂದಿರುವುದೇ ೧೩–೧೪ನೇ ಶತಮಾನಗಳ ಕಾಲದಿಂದ ಪಂಡಿತರಿಂದ ಮೊದಲುಗೊಂಡು ದಾಸರವರೆಗೆ ರಾಜ್ಯಾಧಿಕಾರಿಗಳಾದಿಯಾಗಿ ಕಾಯಕದಯ್ಯಗಳವರೆಗೆ ಎಲ್ಲಾ ಮತದವರೂ ಗಂಡಸರೂ ಹೆಂಗಸರೂ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಕಾಣಿಕೆಗಳನ್ನು ಕನ್ನಡ ವಾಗ್ದೇವಿಯ ಭಂಡಾರಕ್ಕೆ ಸಲ್ಲಿಸಿದ್ದಾರೆ'.[೩]

ಗೋವಿಂದಪೈ ಅವರು ಕ್ರಿ.ಶ. ೨ನೇ ಶತಮಾನದಲ್ಲಿ ಗ್ರೀಕ್ ಪ್ರಹಸನದಲ್ಲಿರುವ ಕನ್ನಡ ಪದಗಳು/ ಮಾತುಗಳನ್ನು ವಿವರವಾಗಿ ಚರ್ಚಿಸಿದ್ದಾರೆ.[೪] ಅವರ ಪ್ರಕಾರ ಈ ಪ್ರಹಸನಕ್ಕಿಂತ ಪೂರ್ವದಲ್ಲಿ ಕನ್ನಡ ಮಾಹಿತಿ ಲಭ್ಯವಿಲ್ಲ. ಈ ಪ್ರಹಸನದಲ್ಲಿ ಬಳಸಿರುವ ಕನ್ನಡ ಪದಗಳನ್ನು ಗಮನಿಸಿದರೆ ಇದಕ್ಕೂ ಮುಂಚೆ ಕನ್ನಡವು ಶೈಶಾವಾವಸ್ಥೆಯಲ್ಲಿದ್ದಿರುವುದಾದರೂ ಅಲ್ಲಿಯೂ ಸಾಹಿತ್ಯ ರಚನೆಯಾಗಿರಬಹುದು ಎಂದು ಹೇಳುತ್ತಾರೆ. ಹಾಗೆಯೇ ವಡ್ಡಾರಾಧನೆ ಗ್ರಂಥವನ್ನು ಗಮನಿಸಿದರೆ ಅದರ ಭಾಷೆ, ಅದರಲ್ಲಿಯ ಹಳೆಯ ವ್ಯಾಕರಣ ಪ್ರಯೋಗಗಳು ಇತ್ಯಾದಿಗಳನ್ನು ಪರಿಶೀಲಿಸಿದಲ್ಲಿ ಅದರ ಕಾಲವನ್ನು ಕ್ರಿ.ಶ. ೭ನೇ ಶತಮಾನದೊಳಗೆ ರಚಿತವಾಗಿರಬೇಕು ಎಂದು ಅನುಮಾನವನ್ನು ವ್ಯಕ್ತಪಡಿಸುತ್ತಾರೆ.[೫]

ಹೀಗೆ ಕನ್ನಡ ಭಾಷೆಯ ಪ್ರಾಚೀನತೆಯ ಬಗ್ಗೆ ಬಂದಿರುವ ಅಂಶಗಳನ್ನು ಗುರುತಿಸಬಹು ದಾಗಿದೆ. ಅಲ್ಲದೇ ಕನ್ನಡ ಸಂಸ್ಕೃತಿಯ ಕುರುಹುಗಳು ಸಿಂಧೂ ನದಿ ಪ್ರದೇಶದ ಭೂ ಸಂಶೋಧನೆಯಲ್ಲಿ ದೊರೆತಿರುವ ಹರಪ್ಪ-ಮಹೆಂಜೊದಾರಗಳ ಅವಶೇಷಗಳಲ್ಲಿ ಕಂಡುಬರುತ್ತವೆ ಎಂದು ಫಾದರ್ ಹಿರಾಸರೇ ಅವರು ಅಭಿಪ್ರಾಯ ಪಡುತ್ತಾರೆ.[೬] ಅಂದರೆ ಕನ್ನಡ ಸಂಸ್ಕೃತಿಯ ಪ್ರಾಚೀನತೆಯನ್ನು ಹರಪ್ಪ-ಮಹೆಂಜೊದಾರೋ ನಾಗರೀಕತೆಯ ಕಾಲಕ್ಕೆ ಕೊಂಡೊಯ್ಯಲಾಗಿದೆ. ಕನ್ನಡ ಸಂಸ್ಕೃತಿ ಎಂದರೆ ಅದರಲ್ಲಿ ಭಾಷೆಯು ಒಂದು

ಭಾಗವಾಗಿರುತ್ತದೆ. ಆದ್ದರಿಂದ ಭಾಷೆಯ ಪ್ರಾಚೀನತೆಯನ್ನು ಆ ನಾಗರೀಕತೆಗಳಲ್ಲಿ ಗುರುತಿಸಲು ಅವಕಾಶವಿದೆ. ಆದರೆ ಆ ಕಾಲದ ಯಾವುದೇ ಲಿಖಿತ ಆಧಾರಗಳು ಲಭ್ಯವಿಲ್ಲ. ಈ ನಿಟ್ಟಿನಲ್ಲಿ ಕನ್ನಡ ಭಾಷೆಯ ಪ್ರಾಚೀನತೆಯನ್ನು ಸಮ್ಮೇಳನಗಳ ಅಧ್ಯಕ್ಷರುಗಳು ಗುರುತಿಸಿದ್ದಾರೆ.

ಕವಿರಾಜಮಾರ್ಗದ ಈಚೆಗೆ ಸಾಹಿತ್ಯವು/ಭಾಷೆಯು ವಿಫುಲವಾಗಿ ಬೆಳೆದು ಬಂದಿದೆ. ಅದಕ್ಕೆ ರಾಜಾಶ್ರಯ, ಧರ್ಮ, ಅನ್ಯದೇಶ್ಯ ಸಾಹಿತ್ಯ /ಭಾಷೆಗಳ ಪ್ರಭಾವ ಪ್ರೇರಣೆಯನ್ನು ನೀಡಿರುವುದನ್ನು ಗಮನಿಸಬಹುದು. ಹೀಗೆ ಕನ್ನಡ ಭಾಷೆಯು ವಿಶಾಲವಾಗಿಯೂ ಸಮೃದ್ಧವಾಗಿಯೂ ಬೆಳೆಯುತ್ತಾ ಬಂದಿದೆ. ಕನ್ನಡ ಭಾಷೆಯ ಪ್ರಾಚೀನತೆಯನ್ನು ಹೇಳುವಲ್ಲಿ ಇನ್ನೊಂದು ಅಂಶವನ್ನು ಗುರುತಿಸಬಹುದು. ಇಲ್ಲಿ ಕೇವಲ ಲಿಖಿತ ಆಧಾರಗಳನ್ನು ಮಾತ್ರ ಮಾನದಂಡವನ್ನಾಗಿರಿಸಿ ಕನ್ನಡದ ಪ್ರಾಚೀನತೆಯನ್ನು ತಿಳಿಸಿದ್ದಾರೆ/ರಚಿಸಿದ್ದಾರೆ. ಆದರೆ ಭಾಷೆ ಎಂಬುದು ಆಡುನುಡಿಯಲ್ಲಿ ಪಳಗಿದ ನಂತರವೇ ಅದು ಲಿಪಿರೂಪ/ಸಾಹಿತ್ಯದ ಮಟ್ಟಕ್ಕೇರಲು ಸಾಧ್ಯ. ಲಿಖಿತ ರೂಪದಲ್ಲಿರುವುದು ಮಾತ್ರವೇ ಭಾಷೆ ಎಂಬಂತೆ ಈ ಚರ್ಚೆಗಳಲ್ಲಿ ವಿವರಿಸಲಾಗಿದೆ. ಈ ಸಂದರ್ಭದಲ್ಲಿ ಕನ್ನಡ ಭಾಷೆಯ ಪ್ರಾಚೀನತೆಯನ್ನು ತಿಳಿಯಪಡಿಸುವಲ್ಲಿ ಯಾಕೆ ಆಡುನುಡಿಯನ್ನು ಗಣನೆಗೆ ತೆಗೆದುಕೊಂಡಿಲ್ಲ ಎಂಬ ಪ್ರಶ್ನೆ ಹುಟ್ಟುತ್ತದೆ.

**೨. ಕನ್ನಡ ಮತ್ತು ಸಂಸ್ಕೃತಕ್ಕೆ ಇರುವ /ಇರಬೇಕಾದ ಸಂಬಂಧ**

'ಭಾರತೀಯ ಭಾಷಾವರ್ಗಗಳಲ್ಲಿಯೇ ಅತ್ಯಂತ ಪುರಾತನವಾದ, ಶ್ರೇಷ್ಠವಾದ, ದೇವಭಾಷೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಸಂಸ್ಕೃತವು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಪ್ರಭಾವ ಮತ್ತು ಪ್ರೇರಣೆಯನ್ನು ಒದಗಿಸುತ್ತಾ ಬಂದಿದೆ. ಆದರೆ ಇಂದು ಇದು ಮೃತ ಭಾಷೆಯಾಗಿದೆ. ಜನಜೀವನದಿಂದ ತುಂಬಾ ದೂರ ಉಳಿದು ಅಳಿವಿನ ಅಂಚಿಗೆ ಸರಿದಿದೆ ಎಂಬುದು ಸರ್ವ ವಿಧಿತವಾದ ಒಂದು ಅಭಿಪ್ರಾಯ. ಆದರೆ ಸಂಸ್ಕೃತ ಭಾಷೆಯು 'ಮೃತ' ಭಾಷೆ ಅಲ್ಲ. ಇದು ಅದರ ಮೇಲಿನ ತಿರಸ್ಕಾರ ಮನೋಭಾವದಿಂದ ಬಂದಿರುವಂತದ್ದು. ಸಂಸ್ಕೃತವು ಭಾರತಕ್ಕೆ ಅಂತರಾತ್ಮ ಸ್ವರೂಪದ್ದು. ನಮ್ಮ ದೇಶದ ಉತ್ತಮ ವಿಚಾರಗಳು, ಗ್ರಂಥಗಳು ವ್ಯಕ್ತವಾಗಿರುವುದು ಈ ಭಾಷೆಯಲ್ಲಿಯೇ. ಸಂಸಾರ ವಿಷಯಗಳ ಅನೇಕ ಸಮಸ್ಯೆಗಳ ವಾಸ್ತವಾಂಶವನ್ನು ಕಂಡುಹಿಡಿಯುವಲ್ಲಿ ಸಹಾಯಕವಾಗುತ್ತದೆ. ಕನ್ನಡ, ತೆಲುಗು, ಮರಾಠಿ, ಬಂಗಾಳಿ ಸಂಸ್ಕೃತಿಗಳೆಂದು ವ್ಯವಹರಿಸುತ್ತೇವೆಯೋ ಅವೆಲ್ಲವೂ ಆರ್ಯ ಸಂಸ್ಕೃತಿಯ ಪ್ರತಿಬಿಂಬಗಳೇ ಆಗಿವೆ. ಇಂಥ ಸಂದರ್ಭದಲ್ಲಿ ಈ ಎಲ್ಲವೂ 'ಮೃತ' ಜನಾಂಗ/ಸಂಸ್ಕೃತಿಗಳೇ ಆಗುತ್ತವೆ. ಆರ್ಯ ಸಂಸ್ಕೃತಿಗೆ ಒಳಪಟ್ಟ ಒಬ್ಬನೇ ಒಬ್ಬ ವ್ಯಕ್ತಿ ಭಾರತದಲ್ಲಿ ಎಲ್ಲಿಯವರೆಗೆ ಇರುತ್ತಾನೋ ಅಲ್ಲಿಯವರೆಗೆ ಸಂಸ್ಕೃತವು ಜೀವಂತವಾದ ಭಾಷೆ. ಆದ್ದರಿಂದ ದಿವ್ಯವಾದ ಅದ್ಭುತವಾದ ಆ ಭಾಷೆಯನ್ನು, ಸಾಹಿತ್ಯವನ್ನು ಆಸ್ವಾದಿಸುವುದು ನಮ್ಮೆಲ್ಲರ ಮುಖ್ಯ ಕರ್ತವ್ಯವಾಗಿದೆ ಎಂದು ಬೆನಗಲ್ ರಾಮರಾಯರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಅಭಿಪ್ರಾಯಪಟ್ಟಿರುವುದನ್ನು ಗಮನಿಸಬಹುದು.[೭]

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸಂಸ್ಕೃತವು ಇಡಿಯಾಗಿ ಭಾರತೀಯ ಸಂಸ್ಕೃತಿಗೆ ತಾಯಿಬೇರಿನಂತಿದೆ. ಉಳಿದ ಭಾಷೆಗಳೆಲ್ಲವೂ ಸಂಸ್ಕೃತದ ಪ್ರಭಾವದಿಂದ ಹುಟ್ಟಿರುವಂತವು. ಅವುಗಳು ತಮ್ಮ ಜೀವಂತಿಕೆಯನ್ನು ಸಂಸ್ಕೃತ ಭಾಷೆಯ ಮೂಲಕ ಪಡೆಯುತ್ತಿವೆ/ಬೆಳೆಯುತ್ತಿವೆ. ಈ ಸಂದರ್ಭದಲ್ಲಿ

'ಬೇರೆ ಭಾಷೆಗಳ ಮೂಲಕ ಸಂಸ್ಕೃತವು ಉಳಿದು/ಬೆಳೆದು ಬರುತ್ತಿದೆ. ವಾಸ್ತವವಾಗಿ ಅದು ಲಿಪಿರೂಪದಿಂದ ದೂರ ಸರಿದಿರಬಹುದು. ಆದರೆ ಅದು ಭಾರತದ ಬಹುತೇಕ ಭಾಷೆಗಳಿಗೆ ಜೀವಸೆಲೆಯಾಗಿ ನಿಂತಿದೆ. ಅಂತೆಯೇ ಕನ್ನಡದ ಬೆಳವಣಿಗೆಗೆ ಸಂಸ್ಕೃತವು ಅವಶ್ಯವಾಗಿದೆ.[೮] ಆದರೆ 'ನಮ್ಮ ಈಗಿನ ಜೀವನಕ್ಕೆ ಸಂಸ್ಕೃತದಲ್ಲಿರುವಷ್ಟು ಮಾತ್ರವೇ ಸಾಕಾಗುವುದಿಲ್ಲ. ಮಾನವನ ಜೀವನ ಅನುಭವವು ಅದು ಹೊಸ ಹೊಸ ಅನುಭವಗಳನ್ನು ಕೊಡುತ್ತಾ ಹೋಗುತ್ತದೆ. ಈ ಎಲ್ಲಾ ಅನುಭವಗಳಿಗೂ, ಮನೋಭಾವಗಳಿಗೂ ಸಂಸ್ಕೃತದಲ್ಲಿ ಇರುವಷ್ಟಕ್ಕೆ ಮಾತ್ರವೇ ಸೀಮಿತಗೊಳಿಸಿಕೊಳ್ಳಬೇಕಾಗಿಲ್ಲ. ಪ್ರಸ್ತುತ ಜೀವನೋಪಕರಣಗಳನ್ನು, ಸನ್ನಿವೇಶಗಳನ್ನು ಕೇವಲ ಸಂಸ್ಕೃತದ ಮೂಲಕ ಮಾತ್ರವೇ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಸಂಸ್ಕೃತ ಭಾಷೆಯೇ ಎಲ್ಲ ಕಾಲಕ್ಕೂ ಜನರಿಗೆ ಹಿಡಿಸಬೇಕೆಂದೇನೂ ಇಲ್ಲ. ಹಾಗೆಂದು ಸಂಸ್ಕೃತ ನಿಂತು ಹೋಗಿದೆ ಎಂದು ನಮ್ಮ ಮನೋಬುದ್ಧಿಗಳ ಬೆಳವಣಿಗೆಗಳೇನೂ ನಿಂತು ಹೋಗಿಲ್ಲ. ನಮ್ಮ ಆಲೋಚನೆಗೆ ಅವಶ್ಯಕತೆಗೆ ಒದಗುವ ಭಾಷೆಯನ್ನು ಸೃಷ್ಟಿಸಿಕೊಳ್ಳಬೇಕಾಗಿದೆ. ಹೀಗೆಂದು ಸಂಸ್ಕೃತವನ್ನು ಅಲ್ಲಗಳೆಯುತ್ತಿಲ್ಲ. ಕನ್ನಡಕ್ಕಿರುವ ಅವಶ್ಯಕತೆಯನ್ನು ತೋರಿಸುವ ಮಾತಿದು'[೯] ಎಂದು ಡಿ.ವಿ.ಜಿ.ಯವರು ತಮ್ಮ ಭಾಷಣದಲ್ಲಿ ಅಭಿಪ್ರಾಯ ಪಡುತ್ತಾರೆ. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ವೈರತ್ವ ಎನ್ನುವುದು ಮತ್ತೊಂದು ಭಾಷೆಯ ಬಗೆಗಿನ ದೃಷ್ಟಿಕೋನವನ್ನು ಎತ್ತಿ ತೋರಿಸುತ್ತದೆ. ಮೂಲತಃ ಡಿ.ವಿ.ಜಿ.ಯವರು ಹೊಸದಕ್ಕೆ ವಿಮುಖವಲ್ಲದ ಸಂಪ್ರದಾಯ ನಿಷ್ಠೆಯ ಮನೋಭಾವದವರು ಎನ್ನುವುದು ಅವರ ಅಭಿವ್ಯಕ್ತಿಯಿಂದ ಗುರುತಿಸಬಹುದು. ಭಾಷೆಯು ಪರಸ್ಪರ ಕೊಳು–ಕೊಡುಗಳ ಮೂಲಕ ಬೆಳೆಯುತ್ತಾ ಹೋಗುವಂತದ್ದು. ಮತ್ತೊಂದು ಅಂಶವನ್ನು ಹೇಳುತ್ತಾರೆ. ಅದೇನೆಂದರೆ ಸಂಸ್ಕೃತದ ಇನ್ನು ಮುಂದಿನ ಜೀವನವು ಕನ್ನಡದ ಮೂಲಕವೇ ನಡೆಯಬೇಕಾಗಿದೆ, ಏಕೆಂದರೆ ಕ್ಲಿಷ್ಟಕರವಾದ ಭಾಷೆಯು ಜನಸಾಮಾನ್ಯರನ್ನು ಮುಟ್ಟುವುದಿಲ್ಲ. ಇಂತಹ ಸಮಯದಲ್ಲಿ ಭಾಷೆಯಲ್ಲಿ ವಿದ್ವತ್ತಿನ ರಾಶಿಯಿದ್ದರೂ ಅವರಿಗೆ ಉಪಯೋಗವಾಗುವ ವಿಷಯಗಳಿದ್ದರೂ ಅದನ್ನು ಕಲಿಯುವ ಗೋಜಿಗೆ ಹೋಗುವುದಿಲ್ಲ. ಆದ್ದರಿಂದ ಜನಸಾಮಾನ್ಯರಿಗೆ ಎಟಕುವಂತಹ ಭಾಷೆಯನ್ನು ಬೆಳೆಸುವ ಕಡೆಗೆ ಗಮನ ಹರಿಸುವುದು ಮುಖ್ಯವಾಗಿದೆ.

ಸಂಸ್ಕೃತವು ಪ್ರೌಢಿಮೆ, ಕ್ಲಿಷ್ಟತೆ, ವಿದ್ವತ್ತು, ಶಾಸ್ತ್ರ ಇತ್ಯಾದಿಗಳಿಂದ ತನ್ನ ಪ್ರತಿಷ್ಠೆಯನ್ನು ಕಾಯ್ದುಕೊಂಡು ಬರುವ ಸಂದರ್ಭದಲ್ಲಿ ಕನ್ನಡವು ಹೊರಗೆ ಬಂದು ಜನಸಾಮಾನ್ಯರನ್ನು ಮುಟ್ಟುವ ಕೆಲಸ ಮಾಡಿತು. 'ಬಸವಣ್ಣ ಅಲ್ಲಮರುಗಳಿಂದಲೂ ಕನಕ ಪುರಂದರರಿಂದಲೂ ವೇದಾಂತ, ತತ್ವ ಪ್ರಚಾರವಾದಷ್ಟು ಸಂಸ್ಕೃತ ವ್ಯಾಖ್ಯಾನಕಾರರಿಂದ ಆಗಿಲ್ಲ. ಕುಮಾರವ್ಯಾಸರು ವಾಲ್ಮೀಕಿಯರಿಂದ ಲಕ್ಷ್ಮೀಶರಿಂದ ಆಗಿರುವಷ್ಟು ಭಾರತ ರಾಮಾಯಣಗಳ ಕಥಾ ಪ್ರಸಾರ ಸಂಸ್ಕೃತದ ನೀಲಕಂಠ ಗೋವಿಂದರಾಜು ಇವರಿಂದಲೂ ಆಗಿಲ್ಲ. ಹೀಗೆ ಸಂಸ್ಕೃತದ ಖ್ಯಾತಿಗಳು ಕನ್ನಡದ ಮೂಲಕ ಬೆಳವಣಿಗೆ ಆಗುತ್ತಿವೆ. ಹಾಗೆಂದ ಮೇಲೆ ಕನ್ನಡವು ಸಂಸ್ಕೃತಕ್ಕೆ ವೈರಿಯೇ? ಹಿಂದೆ ಸಂಸ್ಕೃತದ ಮೂಲಕ ಕನ್ನಡ ಬದುಕಿತ್ತು, ಮುಂದಕ್ಕೆ ಕನ್ನಡದಲ್ಲಿ ಸಂಸ್ಕೃತ ಬದುಕಬೇಕು'[೧೦] ಎಂದು ಡಿ.ವಿ.ಜಿ.ಯವರು ಭಾಷಣದಲ್ಲಿ ಕನ್ನಡ ಮತ್ತು ಸಂಸ್ಕೃತಗಳ ಸಂಬಂಧವನ್ನು ವಿವರಿಸಿದ್ದಾರೆ. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಭಾಷೆಗಳಲ್ಲಿ ವೈರತ್ವವಿಲ್ಲವೆಂದೆ ಹೇಳಬೇಕಾಗುತ್ತದೆ. ಕನ್ನಡವು ಹಲವು ಭಾಷೆಗಳ ಪದಗಳನ್ನು ಸ್ವೀಕರಿಸಿದೆ, ವಿಸ್ತಾರಗೊಂಡಿದೆ. ಅಂಥದರಲ್ಲಿ ಸಂಸ್ಕೃತ ಭಾಷೆಯಿಂದ

ಕೆಲವು ಪದಗಳನ್ನು ಯಥಾವತ್ತಾಗಿ, ಮತ್ತೆ ಕೆಲವು ಪದಗಳನ್ನು ತದ್ಭವ ರೂಪಗಳಲ್ಲಿ ಸ್ವೀಕರಿಸಿದೆ. ಇದನ್ನು ಅಲ್ಲಗಳೆಯುವಂತಿಲ್ಲ. ಹಳಗನ್ನಡವನ್ನು ಗಮನಿಸಿದರೆ ಅದು ಸಂಸ್ಕೃತದ ಛಾಯೆಯಂತೆ ಕಂಡುಬರುತ್ತದೆ. ಆ ಮೂಲಕ ಅದು ರಾಜರಿಗೆ ಮತ್ತು ಪಂಡಿತರಿಗೆ ಮಾತ್ರ ಅರ್ಥವಾಗುವ ಭಾಷೆಯಲ್ಲಿ ಸಾಹಿತ್ಯ ರಚನೆಯಾಗಿದೆ. ಹಾಗೆಂದರೆ ಹಳಗನ್ನಡದ ಕಾಲದ ಜನಸಾಮಾನ್ಯರ ಭಾಷೆಯೇ ಬೇರೆಯಾಗಿತ್ತೆಂದು ಊಹಿಸಲು ಇಲ್ಲಿ ಅವಕಾಶವಿದೆ. 'ಕನ್ನಡ ನುಡಿ ಹುಟ್ಟಿದ್ದು ದ್ರಾವಿಡ ಕುಲದಲ್ಲಿಯಾದರೂ ಅದು ಸಂಸ್ಕೃತ ಪುಷ್ಟವೆಂಬುದು ಸ್ಪಷ್ಟವಿದೆ'[೧೧]

'ಕನ್ನಡವು ಸಂಸ್ಕೃತದೊಂದಿಗೆ ಮಾಡಿಕೊಂಡ ವಿವಾಹದ ಫಲವಾಗಿ ಒಂದು ಪುರಾತನ ಪ್ರಸಿದ್ಧ ಸಾಹಿತ್ಯ ವಂಶಾವಳಿಯು ಹುಟ್ಟಿಕೊಂಡಿತು.'[೧೨] ಸಂಸ್ಕೃತವು ನಮ್ಮ ಭಾರತೀಯ ಸಂಸ್ಕೃತಿಯ ಭಾಷೆ. 'ನಮ್ಮ ನುಡಿಯ ಇತಿಹಾಸ ತಿಳಿಯಬೇಕಾದರೆ ಸಂಸ್ಕೃತವನ್ನು ಅಭ್ಯಸಿಸಿಯೇ ತೀರಬೇಕು. ಆದರೆ ಅದು ಒತ್ತಾಯದ ಭಾಷೆಯಾಗಕೂಡದು'.[೧೩]

ಇವು ಕೆಲವು ಅಧ್ಯಕ್ಷರ ಸಂಸ್ಕೃತದ ಬಗೆಗಿನ ಅಭಿಪ್ರಾಯವನ್ನು ತಿಳಿಯಪಡಿಸುತ್ತವೆ. ಇವರ ಎಲ್ಲಾ ಅಭಿಪ್ರಾಯಗಳ ಹಿಂದೆ ಸಂಸ್ಕೃತಕ್ಕೆ ಮಹತ್ವ ಕೊಟ್ಟಿರುವುದನ್ನು ಗಮನಿಸಬಹುದು. ಆದರೆ ಇವಕ್ಕೆ ವ್ಯತಿರಿಕ್ತವಾಗಿ ಕೆಲವು ಅಧ್ಯಕ್ಷರು ಪ್ರತಿಕ್ರಿಯಿಸಿದ್ದಾರೆ. ಅವುಗಳೆಂದರೆ, ಆರ್ಯರು ಭಾರತಕ್ಕೆ ಬರುವ ಮುಂಚೆ ಇಲ್ಲಿ ದ್ರಾವಿಡ ಸಂಸ್ಕೃತಿಯೊಂದಿತ್ತು. ಆ ಸಂಸ್ಕೃತಿಗೆ ಹೊಂದಿಕೊಂಡ ಗ್ರಂಥಗಳು ಬರೆಯಲ್ಪಟ್ಟಿದ್ದವು. ಅಂದರೆ ಸಂಸ್ಕೃತದ ಸಹಾಯವಿಲ್ಲದೆಯೇ ದ್ರಾವಿಡ ವಾಙ್ಮಯ ತನ್ನ ವೈಶಿಷ್ಟ್ಯವನ್ನು ಪಡೆದಿತ್ತು (ಎಂದು ವೈ. ನಾಗೇಶಶಾಸ್ತ್ರಿಗಳು ಊಹಿಸುತ್ತಾರೆ.). ದ್ರಾವಿಡ ಭಾಷಾ ವರ್ಗದ ಪ್ರಮುಖ ಭಾಷೆಯಾದ ಕನ್ನಡಕ್ಕೆ ದ್ರಾವಿಡ ಸಂಸ್ಕೃತಿಯೇ ಮೂಲವಲ್ಲದೇ ಆರ್ಯ ಸಂಸ್ಕೃತಿಯು ಮೂಲವಲ್ಲ ಎಂದು ಅವರು ಕೆಲವು ಆಧಾರಗಳ ಮೂಲಕ ಸಾಬೀತು ಪಡಿಸುತ್ತಾರೆ.[೧೪] ಇನ್ನೊಂದು ಅಭಿಪ್ರಾಯವನ್ನು ಗಮನಿಸಬಹುದು. ಅದು ಎ.ಆರ್. ಕೃಷ್ಣಶಾಸ್ತ್ರಿಗಳ ಅಧ್ಯಕ್ಷ ಭಾಷಣದಲ್ಲಿ 'ಸಂಸ್ಕೃತದ ಸಹಾಯವಿಲ್ಲದಿದ್ದರೆ ನಮಗೆ ಸಂಸ್ಕೃತಿಯೇ ಇರುತ್ತಿರಲಿಲ್ಲ ಎಂಬುದನ್ನು ನಾನು ನಂಬಲಾರೆ. ದ್ರಾವಿಡರು ಸ್ವತಂತ್ರವಾಗಿ ಬೆಳೆದುಕೊಂಡು ಬಂದಿದ್ದರೆ ಹೇಗಿರುತ್ತಿದ್ದರೋ ಬಲ್ಲವರಾರು? ಇಂದು ಪ್ರಪಂಚದಲ್ಲಿ ಉತ್ತಮ ಸಂಸ್ಕೃತಿಯುಳ್ಳವರೆಂದು ಗಣ್ಯವಾಗಿರುವ ಜನಕ್ಕೆಲ್ಲಾ ಸಂಸ್ಕೃತದ ಸಹಾಯ ಇತ್ತೇ?'[೧೫] ಎಂದು ಪ್ರಶ್ನಿಸುತ್ತಾರೆ.

ಈ ಮುಂಚೆ ಹೇಳಲಾದ ಕೆಲವು ಅಧ್ಯಕ್ಷರ ಅಭಿಪ್ರಾಯಗಳು ಸಂಸ್ಕೃತವಿಲ್ಲದೇ ನಮ್ಮ ಸಂಸ್ಕೃತಿಯೇ ಇಲ್ಲ. ಎಲ್ಲಾ ಭಾಷೆಗಳು ಸಂಸ್ಕೃತದ ಮೂಲಕವೇ ಪ್ರೇರಣೆಯನ್ನು ಪಡೆದಿವೆ ಅಥವಾ ಭಾರತೀಯ ಎಲ್ಲಾ ಭಾಷೆಗಳು ಆರ್ಯ ಸಂಸ್ಕೃತಿಯ ಪ್ರತಿಬಿಂಬಗಳು ಸಂಸ್ಕೃತವನ್ನು ಎಲ್ಲರೂ ಕಡ್ಡಾಯವಾಗಿ ಕಲಿಯಲೇಬೇಕು ಎಂಬಿತ್ಯಾದಿಯಾಗಿ ಸಂಸ್ಕೃತ ಭಾಷೆಯ ಮಹತ್ವವನ್ನು ಎತ್ತಿ ಹಿಡಿಯುವ ಪ್ರಯತ್ನವನ್ನು ಮಾಡಿದರೆ, ಮೇಲಿನ ಎರಡು ಅಭಿಪ್ರಾಯಗಳು ಮಾತ್ರ ಸಂಸ್ಕೃತವನ್ನು ವಿರೋಧಿಸುವ ನಿಟ್ಟಿನಲ್ಲಿ ಮೂಡಿಬಂದಿವೆ. ಸಂಸ್ಕೃತವಿಲ್ಲದೆಯೇ ದ್ರಾವಿಡ ಭಾಷೆ/ಸಂಸ್ಕೃತಿ ಬೆಳೆಯಬಲ್ಲದು. ಕನ್ನಡಕ್ಕೆ ದ್ರಾವಿಡ ಸಂಸ್ಕೃತಿಯೇ ಮೂಲವಾಗಿದೆ. ದೇವಭಾಷೆ, ಆರ್ಯ ಭಾಷೆಯಾದ ಸಂಸ್ಕೃತವು ಒಂದು ಕಾಲಕ್ಕೆ ಔನ್ನತ್ಯದ ಶಿಖರಕ್ಕೇರಿತ್ತು. ಆದರೆ ಅದರ ಆ ಔನತ್ಯವೇ ಅವನತಿಗೂ ಕಾರಣವಾಗಿದೆ ಎಂದು ಹೇಳಬಹುದು.

ಕನ್ನಡ ಭಾಷೆಯಲ್ಲಿಯೂ ಭಾಗಶಃ ಸಂಸ್ಕೃತ ಪದಗಳು ಸೇರಿಕೊಂಡಿರಬಹುದು. ಹಾಗೆಂದು ಕನ್ನಡವನ್ನು ಸಂಸ್ಕೃತ ಜನ್ಯ ಎಂದು ಹೇಳಲಿಕ್ಕಾಗದು. ಆದ್ದರಿಂದ ಸಂಸ್ಕೃತ ಭಾಷೆಯು ಹೇರಿಕೆಯಾಗಬಾರದು. ಅದು ಆಯ್ಕೆಯ ಭಾಷೆಯಾಗಬೇಕು.

ಹಿತಮಿತವಾಗಿ ಕನ್ನಡದ ಜೊತೆಗೆ ಸಂಸ್ಕೃತದ ಪದಗಳನ್ನು ಸೇರಿಸಿದರೆ ಸಕ್ಕರೆ ಹಾಲು ಬೆರೆತಂತೆ ಇರುತ್ತದೆ'[೧೬] ಇಲ್ಲಿ ಕನ್ನಡ ಸಂಸ್ಕೃತಗಳು ಪರಸ್ಪರ ಕೂಡಿಕೊಂಡು ಇರುವುದರಿಂದ ಭಾಷೆ/ಸಾಹಿತ್ಯವು ಉತ್ತಮವಾಗಿರುತ್ತದೆ ಎನ್ನುವುದರ ಮೂಲಕ ಕನ್ನಡಕ್ಕೆ ಸಂಸ್ಕೃತವು ಅವಶ್ಯಕತೆಗೆ ತಕ್ಕಷ್ಟು ಬೇಕು ಎನ್ನುವುದನ್ನು ಸಂಸ್ಕೃತವನ್ನು ಬಳಸದೇ ಕೇವಲ ಕನ್ನಡದ ಪದಗಳನ್ನೇ ಬಳಸಿ ಕೃತಿ ರಚನೆ ಮಾಡುತ್ತೇನೆಂದು ಹೊರಟ ಆಂಡಯ್ಯ ಮುಗ್ಗರಿಸಿದ್ದನ್ನು ಮರೆಯುವಂತಿಲ್ಲ. ಮಾನವನು ತನ್ನ ಭಾವನೆಗಳನ್ನು, ಅಭಿಪ್ರಾಯಗಳನ್ನು ಹೊರಹಾಕಲು ಮತ್ತು ವ್ಯಾವಹಾರಿಕವಾಗಿ ತನಗೆ ಅನುಕೂಲವಾಗುವಂತೆ ಭಾಷೆಯಲ್ಲಿ ಹಲಕೆಲವು ಅನ್ಯದೇಶೀಯ ಪದಗಳನ್ನೇ ಸ್ವೀಕರಿಸಿ ಭಾಷೆಯನ್ನು ವಿಸ್ತಾರಗೊಳಿಸಿಕೊಂಡಿದ್ದಾನೆ. ಹೀಗೆ ಕನ್ನಡವು ಸಂಸ್ಕೃತದಿಂದ ಬೆಳೆದಿದೆ, ಪುಷ್ಟವಾಗಿದೆ. ಆ ಮೂಲಕ ತನ್ನ ಒಡಲಿನಲ್ಲಿಯೇ ಸಂಸ್ಕೃತವನ್ನು ಜೀವಂತವಾಗಿ ಉಳಿಸಿಕೊಂಡು ಬರುತ್ತಿದೆ. ಹೀಗೆ ಕನ್ನಡ ಮತ್ತು ಸಂಸ್ಕೃತಕ್ಕೆ ಇರುವ /ಇರಬೇಕಾದ ಸಂಬಂಧವನ್ನು ಗುರುತಿಸಬಹುದು. ಸಂಸ್ಕೃತವು ಹಲವು ರೀತಿಯಲ್ಲಿ, ಹಲವು ಸಂದರ್ಭಗಳಲ್ಲಿ ಕನ್ನಡವನ್ನು ನಿಯಂತ್ರಿಸುತ್ತಾ ಬಂದಿದೆ ಎಂಬುದನ್ನು ಮರೆಯುವಂತಿಲ್ಲ. ಕನ್ನಡ ಪ್ರಾಚೀನತೆಯನ್ನು ಹೇಳುವಲ್ಲಿ ಕೇವಲ ಲಿಖಿತ ಆಕರಗಳನ್ನು ಮಾತ್ರ ಮಾನದಂಡವಾಗಿ ಬಳಸಲಾಗಿದೆ. ಭಾಷೆ ಎಂದರೆ ಕೇವಲ ಲಿಪಿರೂಪದಲ್ಲಿರುವುದು ಮಾತ್ರವೇ ಅಲ್ಲ. ಅದು ಆಡುನುಡಿಯಲ್ಲಿ ಪಳಗಿದ ಮೇಲೆಯೇ ಲಿಪಿ ರೂಪವನ್ನು ಪಡೆಯಲು ಸಾಧ್ಯ. ಯಾಕೆ ಆಡುನುಡಿಯ ಯಾವ ಅಂಶವನ್ನು ಇವರು ಪ್ರಸ್ತಾಪ ಮಾಡಿಲ್ಲ? ಎಂಬ ಪ್ರಶ್ನೆ ಇಲ್ಲಿ ಉಂಟಾಗುತ್ತಿದೆ.

**೩. ಕನ್ನಡ ಮತ್ತು ಇಂಗ್ಲೀಷ್**

ಇದುವರೆಗೂ ಕನ್ನಡದ ಪ್ರಾಚೀನತೆ ಮತ್ತು ಕನ್ನಡ ಸಂಸ್ಕೃತ ಭಾಷೆಗಳ ಬಗೆಗಿನ ಕೆಲವು ವಿಚಾರಗಳನ್ನು ಚರ್ಚಿಸಲಾಯಿತು. ಈಗ ಕನ್ನಡ ಮತ್ತು ಇಂಗ್ಲೀಷ್ ಭಾಷೆಯ ಬಗ್ಗೆ ಈ ಅಧ್ಯಕ್ಷರು ತಮ್ಮ ಭಾಷಣಗಳಲ್ಲಿ ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದನ್ನು ತಿಳಿಯಬಹುದು. ಕನ್ನಡ ಮತ್ತು ಇಂಗ್ಲೀಷ್ ಪರಸ್ಪರ ಬೇರೆ ಬೇರೆ ಭಾಷೆಗಳು. ವಸಾಹತು ಕಾಲದಲ್ಲಿ ಭಾರತಕ್ಕೆ ಆಗಮಿಸಿದ ಈ ಭಾಷೆ ಇಂದು ಎಲ್ಲರನ್ನು ತನ್ನ ಆಕ್ಟೋಪಸ್ ಹಿಡಿತಕ್ಕೆ ಒಳಗು ಮಾಡಿಕೊಳ್ಳುತ್ತಲಿದೆ. ವಸಾಹತುಶಾಹಿಯ ಪಳೆಯುಳಿಕೆಯಂತೆ ಇದು ಕಂಡುಬರುತ್ತದೆ. ಬಾಹ್ಯವಾಗಿ ಬ್ರಿಟಿಷರ ದಾಸ್ಯದಿಂದ ಮುಕ್ತಿಯಾದರೂ ಆಂತರಿಕವಾಗಿ ಈ ಭಾಷಿಕ ದಾಸ್ಯತನದಿಂದ ಇನ್ನೂ ಬಿಡುಗಡೆ ಹೊಂದಿಲ್ಲವೆಂದೇ ಹೇಳಬಹುದು. ಅದೇನೆ ಇರಲಿ ಕನ್ನಡ ಸಾಹಿತ್ಯ ಸಮ್ಮೇಳನಗಳು ಪ್ರಾರಂಭವಾದ ಸಂದರ್ಭದಲ್ಲಿ ಇನ್ನೂ ಬ್ರಿಟೀಷ್ ಅಧಿಪತ್ಯ ಕೊನೆಗೊಂಡಿರಲಿಲ್ಲ. ಇಂತಹ ಸಂದರ್ಭದಲ್ಲಿ ಅಧ್ಯಕ್ಷರುಗಳ ಇಂಗ್ಲೀಷ್ ಭಾಷೆಯ ಬಗೆಗಿನ ನಿಲುವೇನು, ಹಾಗೆಯೇ ಕನ್ನಡ ಮತ್ತು ಇಂಗ್ಲೀಷ್‌ಗೆ ಇರುವ ಸಂಬಂಧ ಯಾವುದು? ಅದು ಯಾವ ರೂಪದಲ್ಲಿದೆ? ಒಂದು ವೇಳೆ ಕನ್ನಡ ಇಂಗ್ಲೀಷ್‌ಗೆ ಯಾವುದೇ ಸಂಬಂಧ ಇಲ್ಲ ಎಂದು ಹೇಳಿದರೆ ಅದಕ್ಕೆ ಅವರು ನೀಡುವ ವಿವರಗಳೇನು? ಎಂಬುದನ್ನು ಈ ಭಾಗದಲ್ಲಿ ಗುರುತಿಸಲಾಗುತ್ತದೆ. ಇಂಗ್ಲೀಷ್ ಭಾಷೆಯ ಪರಿಚಯವಾದಾಗಿನಿಂದಲೂ ಭಾರತದ

ಪ್ರತಿಯೊಂದು ವಿಚಾರಗಳನ್ನು ಇಂಗ್ಲೀಷ್ ಭಾಷೆಯ ನೆಲೆಗಟ್ಟಿನ ಮೂಲಕವೇ ತಿಳಿದುಕೊಳ್ಳುವ ಪ್ರಯತ್ನಗಳು ನಡೆದಿವೆ. ಆದರೆ ಪರಭಾಷೆಗಳ ಈ ದಬ್ಬಾಳಿಕೆ ಕನ್ನಡಕ್ಕೇನು ಹೊಸತಲ್ಲ. ಅದು ಹಿಂದಿನಿಂದಲೂ ಇಂತಹ ಬಿಕ್ಕಟ್ಟುಗಳನ್ನು ಎದುರಿಸುತ್ತಲೇ ಬಂದಿದೆ/ಬರುತ್ತಿದೆ. ಈ ಹಿಂದೆ ಸಂಸ್ಕೃತವು ಕನ್ನಡವನ್ನು/ದೇಶ ಭಾಷೆಗಳನ್ನೇ ಮೂಲೆಗೆ ಒತ್ತರಿಸುವ ಕೆಲಸವನ್ನು ಮಾಡಿದರೆ ಈಗ ಇಂಗ್ಲೀಷ್ ಭಾಷೆಯು ಮಾಡುತ್ತಿದೆ. ಯಾವುದೇ ಭಾಷೆಯು ಉಳಿಯಬೇಕೆಂದರೆ ಅದು ಜನಭಾಷೆಯಾಗಬೇಕು. ಆದರೆ ಇಂತಹ ಪ್ರೌಢ ಭಾಷೆಗಳು ಜನಮಾನಸದಲ್ಲಿ ಬದುಕುಳಿಯಲು ಅವಕಾಶವಿಲ್ಲ. ಹೊರ ದೇಶಗಳ ಜೊತೆಗಿನ ವ್ಯವಹಾರಕ್ಕಾಗಿ ಒಂದು ಭಾಷೆಯ ಅಗತ್ಯವಿದೆ. ಜಗತ್ತಿನಾದ್ಯಾಂತ ಮುಕ್ಕಾಲು ಪಾಲು ಇಂದು ಇಂಗ್ಲೀಷ್ ಆವರಿಸಿಕೊಂಡಿದೆ. ಈ ಸಂದರ್ಭದಲ್ಲಿ ಸಂಪರ್ಕ ಭಾಷೆಯಾಗಿ ಇಂಗ್ಲೀಷ್ ಕಲಿಯುವುದು ಅನಿವಾರ್ಯವಾಗಿದೆ. ಇಂಗ್ಲೀಷ್ ಭಾಷೆಯ ಕನ್ನಡಕವನ್ನು ಹಾಕಿ ಸಂಸ್ಕೃತವನ್ನು (ಗ್ರಂಥ/ಸಾಹಿತ್ಯ) ಪರಿಶೀಲಿಸಿದರೆ ಸಂಸ್ಕೃತದ ಗ್ರಂಥಗಳಲ್ಲಿಯೂ ಅನೇಕ ನ್ಯೂನ್ಯತೆಗಳು ಕಂಡು ಬರುತ್ತವೆ. ಈ ಸಂಸ್ಕೃತ ಭಾಷೆಯನ್ನೇ ಮೂಲವಾಗಿಟ್ಟುಕೊಂಡ ದೇಶೀ ಭಾಷೆಯ ರಚನೆಗಳಲ್ಲಿಯೂ ಇದೇ ರೀತಿಯ ನ್ಯೂನ್ಯತೆಗಳು ಕಂಡುಬರುತ್ತವೆ.'[೧೭] ಎಲ್ಲೆಲ್ಲಿ ಇಂಗ್ಲೀಷರು ತಮ್ಮ ಸ್ಥಾನಗಳನ್ನು ಬೀಡು ಬಿಟ್ಟರೋ/ವಸಾಹತುಗಳನ್ನು ಸ್ಥಾಪಿಸಿದರೋ ಆ ಪ್ರದೇಶಗಳೆಲ್ಲಾ ಬೆಳವಣಿಗೆ ಹೊಂದಲು ಪ್ರಾರಂಭಿಸಿದವು. ಇದಕ್ಕನುಗುಣವಾಗಿ ರಾಜಕೀಯ ಅನುಕೂಲಕ್ಕಾಗಿ ವಿದ್ಯಾ ಪ್ರಸಾರಕ್ಕಾಗಿ ಇಂಗ್ಲೀಷ್ ಶಾಲೆಗಳು ಸ್ಥಾಪಿಸಲ್ಪಟ್ಟವು. ಆ ಪ್ರದೇಶಗಳಲ್ಲಿನ ಸಾಮಾಜಿಕ, ರಾಜಕೀಯ ವ್ಯವಹಾರಗಳು ಎಲ್ಲವೂ ಇಂಗ್ಲೀಷ್ ಭಾಷೆಯಲ್ಲಿಯೇ ನಡೆಯುತ್ತಿದ್ದವು. ಇಂಗ್ಲೀಷರ ಭಾಷೆಯ ಸಂಪರ್ಕ ಹೆಚ್ಚುತ್ತಾ ಬಂದಂತೆ ಆ ಭಾಷೆಯ ನಡೆ-ನುಡಿಗಳು ಆಚಾರ ವಿಚಾರಗಳು ಇಂಗ್ಲೀಷ್ ಬಲ್ಲವರಿಗೆ ಹೆಚ್ಚು ಆಕರ್ಷಿಸಲ್ಪಟ್ಟವು. ಇದರಿಂದ ಅವರ ವಿಚಾರಗಳೆಲ್ಲವನ್ನು ಇಂಗ್ಲೀಷ್ ಭಾಷೆಯೇ ತನ್ನ ಹತೋಟಿಗೆ ತೆಗೆದುಕೊಂಡಿತು ಎಂದರೆ ತಪ್ಪಾಗಲಾರದು.

ಮದ್ರಾಸ್, ಮುಂಬೈ, ಕಲ್ಕತ್ತಾ ಈ ಪ್ರಾಂತಗಳಲ್ಲಿ ಇಂಗ್ಲೀಷ್ ಭಾಷೆಗನುಗುಣವಾಗಿ, ಅವರ ವಿಚಾರ ಸರಣಿಗನುಗುಣವಾಗಿ ಬೆಳವಣಿಗೆಗಳು ತಲೆದೋರಿದವು. ಯಾಕೆ ಕರ್ನಾಟಕದಲ್ಲಿ ಆ ಪ್ರದೇಶಗಳಲ್ಲಿ ಆದಂತಹ ಬೆಳವಣಿಗೆಗಳು ಸಾದ್ಯವಾಗಲಿಲ್ಲ ಎಂದರೆ ಇಂಗ್ಲೀಷರ/ಬ್ರಿಟೀಷರ ನೇರವಾದ ಪ್ರಭಾವ ಆಗಿಲ್ಲದಿರುವುದು ಮತ್ತು ನೂರಾರು, ಸಾವಿರಾರು ವರ್ಷಗಳ ಇತಿಹಾಸವುಳ್ಳ ಕನ್ನಡ ಇದಕ್ಕೆ ಅವಕಾಶ ಕೊಡಲಿಲ್ಲವೆಂದು ಹೇಳಬಹುದು. ಆದರೆ ಕರ್ನಾಟಕದ ಬ್ರಿಟೀಷ್ ಆಡಳಿತಕ್ಕೊಳಪಟ್ಟ ಪ್ರಾಂತಗಳಲ್ಲಿ ಇಂಗ್ಲೀಷ್ ಮೆಲ್ಲಗೆ ತನ್ನ ದಾಪುಗಾಲನ್ನು ಹಾಕುತ್ತಾ ಬಂದಿತು. ಅಂದಿನಿಂದ ಇಂಗ್ಲೀಷ್ ಮೂಲಕವೇ ಪ್ರತಿಯೊಂದನ್ನು ಆಲೋಚಿಸುವ, ನಿರ್ಣಯಿಸುವ, ಕಾರ್ಯರೂಪಕ್ಕೆ ತರುವ ಪ್ರಯತ್ನಗಳು ಜರುಗಿದವು. ಇದಕ್ಕೆ ನಮ್ಮ ಕನ್ನಡ ಸಾಹಿತ್ಯವೂ ಹೊರತಾಗಿಲ್ಲ. ಇಂಗ್ಲೀಷ್‌ನ ಹೊಸ ಗಾಳಿ ನಮ್ಮ ಸಾಹಿತ್ಯದ ಮೇಲೂ ಬೀಸಲಾರಂಭಿಸಿತು. ಆ ಪ್ರಕಾರವಾಗಿ ನವೀನ ಸಾಹಿತ್ಯ ಪ್ರಕಾರಗಳು ಕನ್ನಡಕ್ಕೆ ಕಾಲಿಟ್ಟವು. 'ಇಂಗ್ಲೀಷನ ಮುಂದೆ ಕನ್ನಡವು ಏತರದು? ಎಂಬಂತೆ ವರ್ತಿಸಲು ಪ್ರಾರಂಭಿಸಿದರು. ಇನ್ನೊಂದು ವಿಚಾರವೆಂದರೆ 'ಇಂಗ್ಲೀಷನ್ನು ಓದಿದವರು/ಕಲಿತವರು ಮಾತ್ರವೇ ಆಡಳಿತ ಹುದ್ದೆಗಳಲ್ಲಿ, ಸರ್ಕಾರಿ ಹುದ್ದೆಗಳಲ್ಲಿ ಸ್ಥಾನವನ್ನು ಪಡೆಯುವುದಾಗಿತ್ತು. ಹೀಗೆ ದೊಡ್ಡ ಬೆಳಕಿನ ಮೋಹದಿಂದ ಕಾಣುವ ತಮ್ಮ ಕಣ್ಣನ್ನು ಈ ಮಾನ್ಯರು ಕುರುಡು ಮಾಡಿಕೊಂಡಿರುವುದು ಸೋಜಿಗ, ಎಂದು ವೀ. ಸೀತಾರಾಮಯ್ಯನವರು ಕನ್ನಡ-ಸಂಸ್ಕೃತಗಳ ನಡುವಿನ ಸಂದರ್ಭದಲ್ಲಿ ಹೇಳಿದ ಮಾತನ್ನು

ಇಲ್ಲಿ ನೆನೆಯಬಹುದಾಗಿದೆ.[೧೮] ವಸಾಹತುಶಾಹಿಗಳು ಇಂಗ್ಲೀಷ್ ವಿದ್ಯಾಭ್ಯಾಸದ ಮೂಲಕ ತಮ್ಮ ಅನುಕೂಲಕ್ಕೆ ತಕ್ಕಂತೆ ತಮ್ಮ ಹಿತಾಸಕ್ತಿಗನುಗುಣವಾಗಿ ಇಂಗ್ಲೀಷ್ ಅಕ್ಷರ ಜ್ಞಾನವುಳ್ಳ ಒಂದು ವರ್ಗದ ಜನರ ಬದುಕನ್ನು ರೂಪಿಸುತ್ತಿತ್ತು. ಆದ್ದರಿಂದ ಆ ಸಂದರ್ಭದಲ್ಲಿ ಇಂಗ್ಲೀಷ್ ಭಾಷೆಯು ಅನಿವಾರ್ಯವಾಗಿತ್ತೆಂದು ಹೇಳಬಹುದು. ಶಿಕ್ಷಣದಲ್ಲಿ ಹೆಚ್ಚಾಗಿ ಆಂಗ್ಲ ಭಾಷೆ, ಅಲ್ಲಿನ ಇತಿಹಾಸ, ರಾಜಕೀಯ, ಸಾಹಿತ್ಯ, ಆಚಾರ-ವಿಚಾರಗಳು, ಸಂಸ್ಕೃತಿ ಈ ಎಲ್ಲವನ್ನು ಪರೋಕ್ಷವಾಗಿಯೇ ಜಾರಿಗೊಳಿಸಲಾಯಿತು. ಅದುವರೆಗೂ ಸಂಸ್ಕೃತದ ಮೂಲಕ ಬಂದ ಕನ್ನಡಕ್ಕೆ ಆ ವಿಚಾರಗಳು ಹೆಚ್ಚು ಆಕರ್ಷಿಸಿದವು. ಅದು ಸಾಹಿತ್ಯದ ಮೇಲೆ ತುಂಬಾ ಪ್ರಭಾವವನ್ನು ಬೀರಿತು. ಹೀಗೆ ಇಂಗ್ಲೀಷ್‌ನಲ್ಲಿ ಪ್ರವೇಶವನ್ನು ಪಡೆದವರು ಸಾಮಾನ್ಯವಾಗಿ ಕನ್ನಡದಲ್ಲಿ ಅಶ್ರದ್ಧೆಯನ್ನು ತೋರಲು ಪ್ರಾರಂಭಿಸಿದರು. ಕಾರಣ ಇಂಗ್ಲೀಷ್‌ನಲ್ಲಿರುವ ಕಾವ್ಯ, ಕತೆ, ವಿಮರ್ಶೆಗಳು ನಮ್ಮ ಭಾಷೆಯಲ್ಲಿಲ್ಲ ಎನ್ನುವ ವಾದವನ್ನೇ ಮಾಡುವ ಇವರು ಏಕೆ ಇಲ್ಲ? ಎಂಬ ಪ್ರಶ್ನೆಯನ್ನು ಹಾಕಿಕೊಂಡಂತೆ ಕಾಣುತ್ತಿಲ್ಲ. ನಂತರ ಬಂದವರು ಈ ಪ್ರಶ್ನೆಗೆ ಉತ್ತರವನ್ನು ಹುಡುಕುವ ಮೂಲಕ ಕನ್ನಡವನ್ನು ಉಳಿಸುವ, ಬೆಳೆಸುವ ಕಾರ್ಯಗಳನ್ನು ಕೈಗೊಂಡರು. '೧೮೩೪ರಲ್ಲಿ ಮೆಕಾಲೆ ಮುಂತಾದವರು 'ಇಂಗ್ಲೀಷ್ ಕಲಿತ ದೇಶೀಯರು ತಮ್ಮ ದೇಶೀಯ ಭಾಷೆಯಲ್ಲಿ ಇಂಗ್ಲೀಷ್‌ನಲ್ಲಿರುವಂತಹ ಗ್ರಂಥಗಳನ್ನು ಬರೆಯುವರೆಂದು ನಿರೀಕ್ಷಿಸಿದರು.'[೧೯] ಎಂಬುದು ತಿಳಿಯುತ್ತದೆ. ಅಲ್ಲಿ ದೇಶೀಯ ಭಾಷೆಗಳಿಗೆ ಪ್ರಾಮುಖ್ಯತೆ ನೀಡಿದ್ದಾರೆ ಇಲ್ಲವಂತಲ್ಲ. ಆದರೆ ಅದು ಇಂಗ್ಲೀಷ್‌ನ ಮೂಲಕ ಬದುಕಬೇಕೆನ್ನುವ ಹುನ್ನಾರ (ಮೆಕಾಲೆ ಮುಂತಾದವರ ಮಾತುಗಳಲ್ಲಿ ಕಂಡುಬರುತ್ತದೆ) ಆವರ ಮಾತುಗಳಲ್ಲಿ ಅಡಗಿದೆ. ಮಾಸ್ತಿಯವರು ತಮ್ಮ ಭಾಷಣದಲ್ಲಿ ಒಂದು ಕಡೆಗೆ ಹೇಳುತ್ತಾರೆ. 'ಇಂಗ್ಲೀಷ್‌ನಲ್ಲಿ ನಾವು ಓದುತ್ತಿರುವುದು ಏನನ್ನು ಎಂದರೆ ಆರನೆಯ ದರ್ಜೆಯ ನಾವೆಲುಗಳನ್ನು. ಇಂಗ್ಲೀಷ್ ಭಾಷೆಯು ಮೂಲತಃ ಪರಿಪೂರ್ಣವಾದ ಭಾಷೆಯಲ್ಲ. ಅದು ಫ್ರೆಂಚ್, ಲ್ಯಾಟೀನ್ ಇತ್ಯಾದಿ ಭಾಷೆಗಳಿಂದ ಎರವಲು ಪಡೆದು ವಿಸ್ತೃತವಾಗಿದೆ, ಪುಷ್ಟತೆಯನ್ನು ಪಡೆದಿದೆ. ಎಲ್ಲಾ ಜ್ಞಾನದ ಭಂಡಾರಗಳನ್ನು ತನ್ನೊಳಗೂ ಮಾಡಿಕೊಂಡಿದೆ. ಮಾಸ್ತಿಯವರ ಮಾತಿನ ಮೂಲಕ ಇಂಗ್ಲೀಷ್ ಎನ್ನುವುದು ಮೂಲತಃ ಒಂದೇ ಭಾಷೆಯಲ್ಲ. ಅದು ಹಲವಾರು ಭಾಷೆಗಳ ಮೂಲಕ ಅನೇಕ ಪದಗಳ ಸ್ವೀಕರಣ ಗುಣದಿಂದ ರಚನೆಯಾಗಿರುವುದು. ಬಹುಶಃ ಬೆಳೆಯುತ್ತಿರುವ ಯಾವುದೇ ಭಾಷೆಯು ಎಂದಿಗೂ ಪರಿಪೂರ್ಣ ಎನಿಸುವುದಿಲ್ಲ. ಅದು ಇಂಗ್ಲೀಷ್ ಆಗಿರಬಹುದು. ಕನ್ನಡ ಆಗಿರಬಹುದು, ಇತರೆ ಯಾವುದೇ ಭಾಷೆಯಾಗಿರಬಹುದು. ಆರನೆಯ ದರ್ಜೆಯ ಸಾಹಿತ್ಯವನ್ನೇ ನಾವು ಉತ್ಕೃಷ್ಟ ಎಂದು ಭಾವಿಸಬೇಕಾದರೆ ಆ ಕಾಲದಲ್ಲಿ ನಮಗೆ ದೊರೆತ ಜ್ಞಾನವು ಆರನೆಯ ದರ್ಜೆಯದಾಗಿತ್ತು ಎನ್ನುವುದರಲ್ಲಿ ಸಂಶಯವಿಲ್ಲ. ಒಂದು ವೇಳೆ ಮೆಕಾಲೆ ಶಿಕ್ಷಣ ನೀತಿಯಲ್ಲಿ ಇಂಗ್ಲೀಷನ್ನು ತರದೇ ಹೋಗಿದ್ದರೂ ಭಾರತೀಯರ ಸಂಸ್ಕೃತಿಯ ಜೀವನದಲ್ಲಿಯೂ, ಶಿಕ್ಷಣ ಪದ್ಧತಿಯಲ್ಲಿಯೂ ಅದು ಪ್ರಮುಖ ಕಾರ್ಯ ಮಾಡುತ್ತಿತ್ತು ಎಂದು ಎನ್.ಎಸ್. ಸುಬ್ಬರಾಯರು ತಮ್ಮ ಭಾಷಣದಲ್ಲಿ ಅಭಿಪ್ರಾಯ ಪಟ್ಟಿದ್ದನ್ನು ಗಮನಿಸಬಹುದು.[೨೦] ಇಂಗ್ಲೀಷ್ ಭಾಷೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡಿರುವ ಮನಸ್ಥಿತಿ ನಮಗೆ ಈ ಅಭಿಪ್ರಾಯದಲ್ಲಿ ಗೋಚರಿಸುತ್ತದೆ. ಅಲ್ಲದೇ 'ಜಗತ್ತಿನ ಎಲ್ಲಾ ಕಡೆಗೂ ಸಂಪರ್ಕ ಕೊಂಡಿಯಂತಿರುವ ಇಂಗ್ಲೀಷ್ ಭಾಷೆಯನ್ನು ಭಾರತದ ರಾಷ್ಟ್ರ ಭಾಷೆಯನ್ನಾಗಿ ಮಾಡಬಹುದು'[೨೧] ಎಂದು ಕೂಡಾ ಅವರೇ ಹೇಳಿದ್ದಾರೆ. 'ಒಂದು ವೇಳೆ ಪ್ರಪಂಚ ಭಾಷೆಯಾದ ಇಂಗ್ಲೀಷನ್ನು ಬಿಟ್ಟರೆ ಎಲ್ಲಾ ಕಡೆಗಳಲ್ಲಿಯೂ ನಾವು ಹಿಂದುಳಿದವರಾಗಿ ಕಡೆಗೀಡಾಗುತ್ತೇವೆ.

ಆದ್ದರಿಂದ ಪ್ರಪಂಚದ ವ್ಯವಹಾರಕ್ಕೆ ಬೇಕಾದಷ್ಟು ಇಂಗ್ಲೀಷನ್ನು ಸಲಕ್ಷಣವಾಗಿ ಕಲಿಯಲೇಬೇಕು. ಆಧುನಿಕಶಾಸ್ತ್ರ ವಿಚಾರಗಳೆಲ್ಲವೂ ನಮಗೆ ದೊರೆಯುವುದು ಇಂಗ್ಲೀಷ್ ಭಾಷೆಯಲ್ಲಿಯೇ'[೨೨] ಅಂದರೆ ಆಧುನಿಕ ಶಾಸ್ತ್ರ ವಿಚಾರಗಳು ಬೇರೆ ಭಾಷೆಯಲ್ಲಿದ್ದರೆ ಅದನ್ನು ಕಲಿಯುವುದರಲ್ಲಿ ಪಡೆಯುವುದರಲ್ಲಿ ಯಾರಿಗೂ ಯಾವ ಅಭ್ಯಂತರವಿಲ್ಲ. ಏಕೆಂದರೆ ಸಾಹಿತ್ಯ, ಸಂಸ್ಕೃತಿ, ಭಾಷೆ ಇವುಗಳಿಗೆ ಮೇರೆ ಎಂಬುದಿಲ್ಲ. ಜ್ಞಾನ ಎಂಬುದು ಯಾವ ಭಾಷೆಯಲ್ಲಿದ್ದರೇನು? ಅದನ್ನು ಪಡೆಯುವ ಮಾರ್ಗವನ್ನು ಹುಡುಕಿಕೊಂಡು ಆ ಮೂಲಕ ನಮ್ಮ ಭಾಷಿಕರಿಗೆ ಸಹಾಯವಾಗುವಂತೆ ಮಾಡಬೇಕು. ಏಕೆಂದರೆ ಎಲ್ಲರೂ ಈ ಜ್ಞಾನ ಪಿಪಾಸುಗಳಾಗಿರುವುದಿಲ್ಲ.

ಸಂಕುಚಿತ ಮನೋಭಾವದಿಂದ ಇತರರನ್ನು ಅವರ ಭಾಷೆಯನ್ನು ತೆಗಳುವುದರಲ್ಲಿ ಯಾವ ಅರ್ಥವೂ ಇರುವುದಿಲ್ಲ. ಹಾಗೆಂದು ವಿಶಾಲ ಹೃದಯಿಗಳೆಂದು ನಮ್ಮ ತನವನ್ನೇ ಬಲಿ ಕೊಡಬಾರದು. ಈ ಮಾತು ಇಂಗ್ಲೀಷ್ ಪರಭಾಷೆಯಾದ ಕಾರಣದಿಂದ ಉಂಟಾಗಿರುವಂತದ್ದು. 'ಒಂದು ವೇಳೆ ಭಾರತಕ್ಕೆ ಆರ್ಯರ ಆಗಮನದ ಬದಲಾಗಿ ಬ್ರಿಟಿಷರ ಆಗಮನವೇ ಆಗಿದ್ದರೆ (ಆಗಮನ ಅನ್ನುವುದಕ್ಕಿಂತ ಆಕ್ರಮಣ / ದಾಳಿ ಎಂಬುದೇ ಸೂಕ್ತ ಎನಿಸುತ್ತದೆ) ಸಂಸ್ಕೃತ ಈಗ ಎಷ್ಟು ಸೇರಿಹೋಗಿದೆಯೋ ಇಂಗ್ಲೀಷ್ ಅಷ್ಟು ಸೇರಿ ಹೋಗಿದ್ದರೆ ಆಗ ಇಂಗ್ಲೀಷನ್ನು ನಮ್ಮದೆಂದು ಒಪ್ಪಿಕೊಳ್ಳುತ್ತಿದೆ? ಹಿಂದೆ ಏನಾದರೂ ಆಗಿದ್ದಿರಲಿ ದೈವ ಸಂಘಟನೆಯಿಂದ ಸಂಸ್ಕೃತಕ್ಕೂ ಕನ್ನಡಕ್ಕೂ ಸಂಬಂಧವೇರ್ಪಟ್ಟಿತು. ಹಾಗೇ ಇದೇ ವಿಚಾರವನ್ನು ಕನ್ನಡಕ್ಕೂ ಇಂಗ್ಲೀಷ್‌ಗೂ ಅನ್ವಯಿಸಬಹುದು'.[೨೩] ಏಕೆಂದರೆ ಇಂಗ್ಲೀಷ್ ನಮ್ಮನ್ನು ಆಳಿಸಿಕೊಂಡ ನಮ್ಮ ಸ್ವಾತಂತ್ರ್ಯವನ್ನೇ ಕಿತ್ತುಕೊಂಡ ದಾಸ್ಯದಲ್ಲಿಯೇ ನರಳುವಂತೆ ಮಾಡಿದ ನಮ್ಮ ಪ್ರಭುತ್ವದ ಭಾಷೆ ಎಂಬ ಕಾರಣವೇ ನಮ್ಮ ಭಾರತೀಯರ ಮನಸ್ಸಿನಲ್ಲಿ ಗಟ್ಟಿಯಾಗಿ ಬೇರೂರಿದೆ. ಆ ಮೂಲಕ ಅದನ್ನು ಕನ್ನಡದ ಸಮಾನವಾಗಿ ಅಥವಾ ಇತರ ದೇಶೀಯ ಭಾಷೆಗಳಂತೆ ಕಾಣಲು ಸಾಧ್ಯವಾಗುತ್ತಿಲ್ಲ.

ಆದರೂ ಈ ಭಾಷೆಯಿಂದ ನಮಗೆ ತುಂಬಾ ಪ್ರಯೋಜನವಾಗಿದೆ ಎಂದು ಇದು ಪ್ರಪಂಚದ ಭಾಷೆಗಳ ಸಾರವನ್ನೆಲ್ಲಾ ಹೀರಿಕೊಂಡ ಭಾಷೆಯಾದ್ದರಿಂದ ಸ್ವಾತಂತ್ರ್ಯ ಬಂದ ಮೇಲೂ ಶಿಕ್ಷಣದಲ್ಲಿ ಇಂಗ್ಲೀಷ್ ಭಾಷೆ ಇರಬೇಕು ಎಂಬುದರ ಬಗ್ಗೆ ಈ ಕೆಳಗಿನ ವಿವರಣೆಗಳ /ಅಭಿಪ್ರಾಯಗಳ ಮೂಲಕ ತಿಳಿಯಬಹುದು. 'ಇಂಗ್ಲೀಷ್ ಭಾಷೆಯು ಬಹುಕಾಲದಿಂದ ನಮ್ಮಲ್ಲಿ ಬಳಕೆಯಲ್ಲಿರುವದು ಮಾತ್ರವೇ ಅಲ್ಲದೇ ಈ ಪ್ರಪಂಚದಲ್ಲಿ ಅತ್ಯಂತ ಹೆಚ್ಚಾಗಿ ಹಬ್ಬಿ ಹರಡಿರುವ ಭಾಷೆಯಾಗಿರುವುದರಿಂದ ಪ್ರಾಧಾನ್ಯದಲ್ಲಿ ದೇಶ ಭಾಷೆಗೆ ಎರಡನೆಯದಾಗಿದ್ದೇ ತೀರುವುದು'.[೨೪] ಇಲ್ಲಿ ಮತ್ತೊಂದು ಹೇಳಿಕೆಯನ್ನು ಗಮನಿಸಬಹುದು. 'ಇನ್ನೂ ಮುಂದೆ ಕೂಡ ಇಂಗ್ಲೀಷ್ ಭಾಷೆಯ ಬೋಧನೆಯನ್ನು ಸಾಧ್ಯವಾದಷ್ಟು ಪ್ರೌಢವಾಗಿಯೇ ನಡೆಯಿಸಿಕೊಂಡು ಬರುವುದು. ಆದರೆ ಭಾಷಾಂತರ ವಿಚಾರಗಳನ್ನು ಮಾತೃ ಭಾಷೆಯ ಮೂಲಕ ಕಲಿಸುವುದು ಸೂಕ್ತವೆಂದು, ಯುಕ್ತವೆಂದು ನನಗೆ ಮನದಟ್ಟಾಗಿದೆ.'[೨೫] ಈ ಎರಡು ಹೇಳಿಕೆಗಳು ನಾಡಿನ ಪ್ರಸಿದ್ಧ ಗಣ್ಯವ್ಯಕ್ತಿಗಳೆ ಮೊದಲನೆಯದಾಗಿ ಶ್ರೀ ಪಂಡಿತ್ ಜವಾಹರಲಾಲ್ ನೆಹರು ಅವರದು. ಎರಡನೆಯದಾಗಿ ಮೌಲಾನಾ ಅಬುಲ್‌ಕಲಾಮ್ ಅಜಾದ್ ಅವರದು. ಮೊದಲನೆಯ ಹೇಳಿಕೆಯಲ್ಲಿ ಇಂಗ್ಲೀಷ್ ಭಾಷೆ ಬಹುಕಾಲದಿಂದಲೂ ನಮ್ಮಲ್ಲಿ ಬಳಕೆಯಲ್ಲಿದೆ ಎಂದು ಹೇಳಲಾಗಿದೆ. ಬಹುಕಾಲ ಎಂದರೆ ಸುಮಾರು ೨

ಶತಮಾನಗಳ ಕಾಲ ಎಂದು ತೆಗೆದುಕೊಂಡರೂ ಆ ಕಾಲದಲ್ಲಿ ಇಂಗ್ಲೀಷ್ ಭಾಷೆಯನ್ನು ಎಲ್ಲರೂ ಬಳಸುತ್ತಿದ್ದರೇ, ಜನರಾಡುವ ಭಾಷೆ ಕೂಡಾ ಇಂಗ್ಲೀಷ್ ಆಗಿತ್ತೆ? ಆಗಿರಬಹುದು. ಅದು ಪರಂಗಿ ಪ್ರಜೆಗಳು ತಮ್ಮ ಪ್ರಭುತ್ವ ಭಾಷೆಯಾಗಿ ಮಾಡಿಕೊಂಡಿರಬಹುದು. ಹಾಗೆಂದು ಬಹುಕಾಲದಿಂದಲೂ ನಮ್ಮಲ್ಲಿ ಬಳಕೆಯಲ್ಲಿದೆ ಎಂದರೆ ಕೇವಲ ಇಂಗ್ಲೀಷ್ ಬಲ್ಲವರ ಒಂದು ವರ್ಗಕ್ಕೆ ಮಾತ್ರ ಅದು ಸೀಮಿತವಾಗಿತ್ತೆಂದು ಹೇಳಬಹುದು.

ಇನ್ನು ಎರಡನೆಯ ಹೇಳಿಕೆಯಲ್ಲಿ ಇಂಗ್ಲೀಷ್ ಭಾಷೆಯನ್ನು ಶಿಕ್ಷಣದಲ್ಲಿ ಸಾಧ್ಯವಾದ ಮಟ್ಟಿಗೆ ಉನ್ನತವಾಗಿ/ಪ್ರೌಢವಾಗಿ ಬಳಸುವುದು ಮತ್ತು ಮಾತೃ ಭಾಷೆಗಳ ಸ್ಥಾನವನ್ನು ಕೊಡಲಾಗಿದೆ. ಇಲ್ಲಿ ಇಂಗ್ಲೀಷ್ ಭಾಷೆಗೆ ಕೊಟ್ಟಿರುವಷ್ಟು ಕಾಳಜಿ ಮಾತೃಭಾಷೆಗಳಿಗೆ ಕೊಟ್ಟಿಲ್ಲ ಎನ್ನುವುದು ತಿಳಿಯುತ್ತದೆ. ಇಂಗ್ಲೀಷನ್ನು ವಿದ್ಯಾಭ್ಯಾಸದಲ್ಲಿ ಹೇಗೆ ಪ್ರೌಢವಾಗಿ ತರಬೇಕು ಎಂದು ಹೇಳುತ್ತಾರೋ ಮಾತೃಭಾಷೆಗಳಿಗೂ ಆ ಪ್ರೌಢಸ್ಥಾನವನ್ನು ಕೊಡಬೇಕಾಗಿತ್ತು. ಭಾಷಾಂತರಗಳಿಗೆ ಮಾತ್ರ ಮಾತೃಭಾಷೆಗಳ ಮೂಲಕ ಕಲಿಸುವುದು ಸೂಕ್ತ ಎನ್ನುವುದಕ್ಕಿಂತ ಇಡಿಯಾಗಿ ಎಲ್ಲಾ ವಿಚಾರಗಳನ್ನು ಮಾತೃ ಭಾಷೆಗಳಲ್ಲಿ ಕಲಿಸುವುದು ಸೂಕ್ತ ಎಂದಿದ್ದರೆ ಸಮಂಜಸವಾಗಿರುತ್ತಿತ್ತು. ಹಾಗೆಂದು ಯಾವುದೋ ಒಂದು ಕಾಲದ ಮಾತ್ಸರ್ಯದಿಂದ ಇಂಗ್ಲೀಷನ್ನು ತೆಗಳುವ ಅವಶ್ಯಕತೆ ಇಲ್ಲ. 'ಇಂಗ್ಲೀಷ್ ಭಾಷೆ ನಮ್ಮ ಮತ್ತು ಪ್ರಪಂಚದ ನಡುವೆ ಇರುವ ಬೆಳಕಿನ ಕಿಂಡಿ ಸೇತುವೆ. ಆ ಮೂಲಕ ಅಲ್ಲಿನ ಜ್ಞಾನದ ಗಾಳಿ ಬೆಳಕು ಹರಿದು ಬರಬೇಕು. ನಮ್ಮದು ವಿಶ್ವದ ಕಡೆಗೆ ಹರಿಯಬೇಕು. ರಾಷ್ಟ್ರೀಯ ವ್ಯವಹಾರದಲ್ಲಿ ಅದಕ್ಕೆ ಯಾವ ಸ್ಥಾನ ಲಭ್ಯವಾಗುತ್ತದೆ ಎನ್ನುವುದು ಮುಖ್ಯವಲ್ಲ. ಭಾರತದ ೧೪ ಭಾಷೆಗಳು ತಂತಮ್ಮ ಸ್ಥಾನದಲ್ಲಿ ಭದ್ರವಾಗಿ ನೆಲೆ ನಿಂತ ಮೇಲೆ ಆಂಗ್ಲ ಭಾಷೆಗೆ ಒಂದು ಪೀಠವು ಇರಲೇಬೇಕು. ಏಕೆಂದರೆ ಅದು ಆಧುನಿಕ ವಿಜ್ಞಾನದ ಜಗತ್ತನ್ನೇ ನಮ್ಮ ಸಾಮೀಪ್ಯಕ್ಕೆ ಬರಿಸಿದೆ. ಆಡಳಿತ ವ್ಯವಹಾರದಲ್ಲಿಯೂ ಶಿಕ್ಷಣ ಪ್ರಸಾರದಲ್ಲಿಯೂ ಪ್ರಬಲ ಪ್ರಭಾವವನ್ನು ಬೀರಿದೆ. ಅಷ್ಟೇ ಅಲ್ಲದೆ ದೇಶಕ್ಕೆ ರಾಜಕೀಯ ಐಕ್ಯವಿಧಿಯನ್ನು ಉಪದೇಶಿಸಿದೆ. ಸ್ವಾತಂತ್ರ್ಯ ಭಾವನೆಯನ್ನು ಬೆಳೆಸಲು ಸಹಾಯಕವಾಗಿದೆ. ಒಮ್ಮೆ ಪ್ರಭು ಭಾಷೆಯಾಗಿದ್ದರೂ ಅದು ಈಗ ಒಡನಾಡುವುದಕ್ಕೆ ಸಿದ್ಧವಾಗಿದೆ'[೨೬] ಎಂದು ಕಡಂಗೋಡ್ಲು ಶಂಕರಭಟ್ಟರು ತಮ್ಮ ಭಾಷಣದಲ್ಲಿ ಇಂಗ್ಲೀಷ್‌ನ ಪರವಾಗಿರುವುದನ್ನು ಕಾಣಬಹುದು. ಇವರು ಕೊಟ್ಟಂತಹ ಈ ವಿವರಣೆಯಲ್ಲಿ ಆಂಗ್ಲ ಭಾಷೆಗೆ ಒಂದು ಪೀಠವು ಇರಲೆಬೇಕು ಎಂಬುದು ಮತ್ತು ದೇಶಕ್ಕೆ ರಾಜಕೀಯ ಐಕ್ಯ ವಿಧಿಯನ್ನು ಉಪದೇಶಿಸಿದೆ ಎಂಬ ಎರಡು ಅಂಶಗಳನ್ನು ಗಮನಿಸಿದರೆ ಭಾರತದಲ್ಲಿ ದೇಶೀಯ ಭಾಷೆಗಳಿಗೆ ಸರಿಯಾದ ನೆಲೆ ಸಿಕ್ಕಿಲ್ಲ. ನೆಲೆ ಸಿಕ್ಕಿದೆ ಎಂದುಕೊಂಡರೂ ಅವು ಭಾಷಾವಾರು ಪ್ರಾಂತ ರಚನೆಗೆ ಅನುಗುಣವಾಗಿ ಅವುಗಳಿಗೆ ಒಂದು ಸ್ಥಾನವನ್ನು ಕೊಡಲಾಯಿತೇ ವಿನಃ ಆಯಾ ಭಾಷೆಯಲ್ಲಿರುವ ಪ್ರೌಢಿಮೆ, ವಿದ್ವತ್ತು, ಸಾಹಿತ್ಯ ಇತ್ಯಾದಿ ವಿಷಯಗಳನ್ನು ಅನುಲಕ್ಷಿಸಿ ಅಲ್ಲ. ಅಂತದ್ದರಲ್ಲಿ ಪರಭಾಷೆಯಾದ ಇಂಗ್ಲೀಷ್ ದೇಶಭಾಷೆಗಳನ್ನೇ ಮೂಲೆಗೆ ಒತ್ತರಿಸುತ್ತದೆ ಎಂಬ ಕೂಗು ಕೇಳಿ ಬರುತ್ತಿರುವಾಗ ಇನ್ನು ಇಂಗ್ಲೀಷ್ ಭಾಷೆಗೊಂದು ಪೀಠ ಪತಿಯ ಸ್ಥಾನವನ್ನು ಕೊಟ್ಟರೆ ಭಾರತೀಯ ಭಾಷೆಗಳ ಸ್ಥಿತಿ ಏನಾಗಬಹುದೆಂದು ಸ್ವಲ್ಪ ಯೋಚಿಸಿರಬೇಕಲ್ಲವೇ?

ಹಾಗೇ ಇನ್ನೊಂದು ಅಂಶ ಮೂಲತಃ ಒಡೆದು ಆಳುವ ನೀತಿಯಿಂದ ಬಂದಿರುವಂತಃ ಈ ಭಾಷೆ

ಐಕ್ಯವಿಧಿಯನ್ನು ಉಪದೇಶಿಸಲು ಸಾಧ್ಯವೆ? ಇಂಗ್ಲೀಷ್ ಶಿಕ್ಷಣ ಕ್ರಮದಿಂದಲೇ ಇಂಗ್ಲೀಷ್ ಬಲ್ಲವರು ಉತ್ತಮ ಜ್ಞಾನಿಗಳು, ಮೇಧಾವಿಗಳು ಎಂಬ ಒಂದು ವರ್ಗವನ್ನೇ ಸೃಷ್ಟಿಸಿದೆ. ದೇಶೀಯ ಭಾಷೆಯನ್ನು ಬಲ್ಲವರದೇ ಒಂದು ವರ್ಗವಾದರೆ ಇಂಗ್ಲೀಷ್ ಭಾಷೆ ಬಲ್ಲವರದೇ ಒಂದು ವರ್ಗವಾಗುತ್ತದೆ. ಇಂತಹದ್ದರಲ್ಲಿ ಅದು ಐಕ್ಯವಿಧಿಯನ್ನು ಉಪದೇಶಿಸುತ್ತದೆ ಎಂದು ನಂಬಬಹುದೆ? ಇರಬಹುದು ನಮಗೆ ನಮ್ಮತನದ ಬಗ್ಗೆ ಅರಿವು ಉಂಟುಮಾಡಿದವರು ಕೆಲವು ಭಾರತೀಯ ಒಲವುಳ್ಳ ಆಂಗ್ಲ ಜನಗಳೇ ಹಾಗೆಂದು ಅದುವರೆಗೂ ನಮ್ಮತನದ ಅಥವಾ ಭಾರತೀಯ ಅಸ್ಮಿತೆಯ ಬಗ್ಗೆ ಇಲ್ಲಿನ ಜನಗಳಿಗೆ ಅರಿವು ಇರಲಿಲ್ಲವೆಂದಲ್ಲ. ಅದಕ್ಕೊಂದು ಅಧಿಕೃತವಾದ ಅವಕಾಶವೊಂದು ಇರಲಿಲ್ಲವೆಂದು. ಹೇಳಬಹುದು. ಆದರೆ ಈಗ ಅದು ತನ್ನ ಪ್ರಭು ಸ್ಥಾನದ ನೆಲೆಯನ್ನು ಬಿಟ್ಟು ಒಡನಾಡಿಯಾಗಿ ಬರಲು ಸಿದ್ಧವಾಗಿದೆ. ಆದರೂ ಸ್ವಲ್ಪ ಅನುಮಾನವೇ. ಹೀಗೆ ಕೆಲವರು ಇಂಗ್ಲೀಷ್ ಸ್ಥಾನವನ್ನು ಇಂಡಿಯಾದಲ್ಲಿ ಗಟ್ಟಿಗೊಳಿಸಲು ತಮ್ಮ ಅಭೀಷ್ಟೆಯನ್ನೇ ತೋರಿದರೆ ಮತ್ತೆ ಕೆಲವರು ಇಂಗ್ಲೀಷ್ ಭಾಷೆಯಿಂದ ದೇಶೀಯ ಭಾಷೆಗಳಿಗೆ ಆಗುತ್ತಿರುವ ಅನಾಹುತ ಮತ್ತು ಇತ್ಯಾದಿ ವಿಚಾರಗಳ ಮೂಲಕ ಅದನ್ನು ವಿರೋಧಿಸಿದವರು ಇದ್ದಾರೆ. ಅವರ ಹೇಳಿಕೆಗಳನ್ನು, ಅಭಿಪ್ರಾಯಗಳನ್ನು ಈ ಮುಂದಿನಂತೆ ನೋಡಬಹುದು.'ಇಂಗ್ಲೀಷ್ ಪ್ರಪಂಚದ ವ್ಯವಹಾರ ಭಾಷೆ ನಿಜ. ಹಾಗೆಂದು ಪ್ರಪಂಚದ ಎಲ್ಲಾ ದೇಶಗಳು ಇಂಗ್ಲೀಷನ್ನು ಸ್ವೀಕರಿಸಲಿಲ್ಲ. ಜಪಾನ, ಜರ್ಮನಿ, ಚೀನಾ ಮುಂತಾದ ರಾಷ್ಟ್ರಗಳು ತಮ್ಮ ಭಾಷೆಯ ಮೂಲಕವೇ ನವಚೈತನ್ಯವನ್ನು ಪಡೆದವು. ಇಂಗ್ಲೀಷ್ ಕಲಿಯದೇ ಇದ್ದರೆ ನಮ್ಮ ರಾಷ್ಟ್ರ ಸುಧಾರಿಸುತ್ತಿರಲಿಲ್ಲ. ಈ ಹೊಸ ಕಲ್ಪನೆಗಳು ನಮಗೆ ಬರುತ್ತಿರಲಿಲ್ಲ ಎಂಬ ಮಾತಿನಲ್ಲಿ ನನ್ನ ವಿಶ್ವಾಸವಿಲ್ಲ. ಸ್ವಾತಂತ್ರ್ಯಾದಿ ಕಲ್ಪನೆಗಳು ಈಗಿನ ಯುಗ ಲಕ್ಷಣಗಳಾಗಿವೆ. ಅವು ಭಾಷೆಯನ್ನು ಅವಲಂಬಿಸಿಲ್ಲ. ಕಾಲವನ್ನವಲಂಬಿಸಿವೆ. ಆದುದರಿಂದ ನವಯುಗದವರಾದ ನಾವು ಇಂಗ್ಲೀಷೇ ಅಧಿದೇವತೆಯೆಂದು ತಿಳಿಯಕೂಡದು'[೨೭] ಎಂದು ದಿವಾಕರ ರಂಗರಾಯರು ತಮ್ಮ ಭಾಷಣದಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಇದುವರೆಗೂ ಇಂಗ್ಲೀಷಿಗಿರುವ ಸ್ಥಾನವನ್ನು ಪಲ್ಲಟಗೊಳಿಸಿದ್ದಾರೆ. ಇಂಗ್ಲೀಷ್‌ನ ಮೂಲಕವೇ ನಮಗೆ ಸ್ವತಂತ್ರ್ಯಾದ ಪರಿಕಲ್ಪನೆಗಳು ಹೊಸ ಜ್ಞಾನದ ವಿಷಯಗಳು ದೊರೆಯುತ್ತವೆ. ಎಂಬ ನಂಬಿಕೆ ಹುಸಿಯಾಗಬಹದು. ಒಂದು ವೇಳೆ ಅಂತಹ ವಿಷಯಗಳು ನಮ್ಮ ದೇಶೀಯ ಭಾಷೆಗಳಲ್ಲಿಯೇ ಇರಬಹುದು. ಅವುಗಳನ್ನೇ ಅರಿಯುವ ಗೋಜಿಗೆ ಕೈ ಹಾಕುವುದಿಲ್ಲ. ಕಾಲದ ಒತ್ತಡಗಳು ಬಂದಾಗ ಅವು ತಾವಾಗಿಯೇ ಮುಪ್ಪುರಿಗೊಂಡು ಒತ್ತರಿಸಿಕೊಂಡು ಬರುತ್ತವೆ. ಅವು ಕೇವಲ ಭಾಷೆಯಿಂದ ಮಾತ್ರ ಬರುತ್ತವೆ ಎಂದು ಹೇಳಲಿಕ್ಕಾಗದು ಎಂಬುದು ಇವರ ವಿಚಾರ.

ಬ್ರಿಟಿಷರ ಆಳ್ವಿಕೆಯ ಮೊದಲೇ ಸಾವಿರಾರು ವರ್ಷಗಳಿಂದ ಭಾರತವು ಬೇರೆ ಬೇರೆ ರಾಜ್ಯದ ಪ್ರಭಾವಕ್ಕೆ ಒಳಗಾಗಿದ್ದೇನೋ ನಿಜ. ಹಾಗೆಂದು ಆ ರಾಜ್ಯಗಳು ಇಲ್ಲಿನ ಜನಜೀವನದ ಮೇಲೆ ಭಾಷೆ, ಸಾಹಿತ್ಯ, ಸಂಸ್ಕೃತಿಯ ಮೇಲೆ ಯಾವುದೇ ಒತ್ತಾಯ, ಹೇರಿಕೆಯನ್ನು ಹಾಕಲಿಲ್ಲ. ಆ ರಾಜ್ಯಗಳಲ್ಲಿನ ಕೆಲವು ವಿಚಾರಗಳಿಗೆ ಮನ ಸೋತು ಅವುಗಳನ್ನು ಅನುಕರಿಸಲು ಪ್ರಾರಂಭಿಸಿದರು. ಇದರಿಂದ ತಮ್ಮತನಕ್ಕೆ ತಾವೇ ಎರವಾಗುವ ಸಂದರ್ಭವನ್ನೊದಗಿಸಿಕೊಂಡರು. 'ದಕ್ಷಿಣಕ್ಕೆ ನಡೆದುಕೊಂಡು ಬರುತ್ತಿದ್ದ ಇಂಥ ದಾಳಿಗೆ ಒಳಗಾಗದೇ ಭಾರತೀಯ ಸಂಸ್ಕೃತಿಯ ಪರಿಶುದ್ಧವಾದ ಸ್ವರೂಪವನ್ನು ತಕ್ಕಮಟ್ಟಿಗಾದರೂ

ಕಾಯ್ದುಕೊಂಡು ಬಂದವರೆಂದರೆ ಕನ್ನಡ ಜನಾಂಗದವರು. ಆದರೆ ಇಂಗ್ಲೀಷರ ಆಡಳಿತ ಕ್ರಮವೇ ಬೇರೆ ಇದ್ದಿತು. ಸಾರ್ವಜನಿಕ ಶಿಕ್ಷಣದ ನಿಮಿತ್ತವಾಗಿ ತಮ್ಮ ಭಾಷೆಯನ್ನೇ ಇಲ್ಲಿಯ ಎಲ್ಲಾ ಜನಾಂಗಗಳ ಮೇಲೆ ರಾಜಕೀಯ ಅಧಿಕಾರದ ವರ್ಚಸ್ವ ಹೇರಿ ದೇಸೀಯ ಭಾಷೆಗಳ ಸದ್ದಡಗಿಸುವ ಹಂಚಿಕೆಯನ್ನು ಅವರು ಹಾಕಿದರು.'[೨೮] ಮೆಕಾಲೆಯ ಶೈಕ್ಷಣಿಕ ನಿರ್ಣಯ (೧೮೩೫) ಕೊಟ್ಟ ಕಾಲದಿಂದ ಶಿಕ್ಷಣದಲ್ಲಿ ಇಂಗ್ಲೀಷ್ ಭಾಷೆಗೆ ಒಂದು ಅಧಿಕೃತತೆ ಸಿಕ್ಕಂತಾಯಿತು. ಇದಕ್ಕೆ ನಮ್ಮ ದೇಶೀಯರ ಪ್ರೋತ್ಸಾಹ ಕೂಡಾ ಇತ್ತೆಂಬುದನ್ನು ಮರೆಯುವಂತಿಲ್ಲ.

ವಿದ್ಯಾಭ್ಯಾಸ ಕ್ರಮದಲ್ಲಿ ಇಂಗ್ಲೀಷ್ ಭಾಷೆ ತಂದಿರುವುದನ್ನು (ಸ್ವದೇಶಿ ಮತ್ತು ವಿದೇಶಿಯ ರಾದಿಯಾಗಿ) ಬಹುಸಂಖ್ಯಾತರು ಖಂಡಿಸಿದ್ದಾರೆ. ಗಾಂಧೀಜಿಯವರು ಹೀಗೆ ಹೇಳುತ್ತಾರೆ. 'ಪರಭಾಷೆಯ ಮೂಲಕದ ಶಿಕ್ಷಣ ನಮ್ಮ ಮಕ್ಕಳ ಬುದ್ಧಿ ಶಕ್ತಿಯನ್ನು ಬೆಂಡುಮಾಡಿದೆ. ಅವರ ನರಗಳನ್ನು ದುರ್ಬಲಗೊಳಿಸಿದೆ. ಅವರನ್ನು ಬಾಯಿಪಾಠ ಮಾಡುವ ಗಿಳಿಗಳನ್ನಾಗಿ ಮಾಡಿದೆ. ಪ್ರತಿಭಾನ್ವಿತವಾದ ಸೃಷ್ಟಿಕಾರ್ಯಕ್ಕೆ ಅನರ್ಹರನ್ನಾಗಿ ಮಾಡಿದೆ. ಅಂತರಾಷ್ಟ್ರೀಯ ವ್ಯವಹಾರ ಭಾಷೆಗೆ ಇಂಗ್ಲೀಷ್ ಅವಶ್ಯಕ ಅದು ನನಗೆ ಗೊತ್ತು. ಆದ್ದರಿಂದ ಅದನ್ನು ಕೆಲವರು ಕಲಿತರೆ ಸಾಕು. ಅದು ಉತ್ತಮ ಆಲೋಚನೆಗಳ ಮತ್ತು ಉತ್ತಮ ಸಾಹಿತ್ಯದ ಅಕ್ಷಯ ನಿಧಿಯೇ ನಿಜ. 'ನಾನೇನಾದರೂ ಸರ್ವಾಧಿಕಾರಿಯಾಗಿದ್ದರೆ ಈ ಕೂಡಲೇ ಪರಭಾಷೆಯ ಮೂಲಕದ ವಿದ್ಯಾಭ್ಯಾಸವನ್ನು ನಿಲ್ಲಿಸುತ್ತಿದ್ದೆ'[೨೯] ಹೀಗೆಂದ ಗಾಂಧೀಜಿಯವರೆ ತಮ್ಮ ಹರಿಜನ ಪತ್ರಿಕೆಯನ್ನು ಇಂಗ್ಲೀಷ್ ಭಾಷೆಯಲ್ಲಿ ಹೊರಡಿಸಿದ್ದರು ಎಂಬುದನ್ನು ಗಮನಿಸಬಹುದು.

ಯಾವುದೇ ಭಾಷೆಯು ಅದು ಬೆಳಕಾಗಿದ್ದರೆ ನಮ್ಮಲ್ಲಿರುವ ಅಜ್ಞಾನದ ಕತ್ತಲೆಯನ್ನು ಹೊಡೆದೋಡಿಸಲು ಸಾಧನವಾಗಿಸಬಹುದು. ಅದನ್ನು ಮೀರಿ ಬೆಂಕಿಯಾಗಿ ನಮ್ಮನ್ನು ಸುಡಲು ಬರುವಾಗ ಅದನ್ನು ವಿರೋಧಿಸುವಲ್ಲಿ ಅರ್ಥವಿದೆ. ಆದರೆ ಈಗ ಬೆಳಕ್ಯಾವುದು, ಬೆಂಕಿ ಯಾವುದು ಎಂಬುದನ್ನು ಅರಿಯದ ಪರಿಸ್ಥಿತಿ ಒದಗಿಬಂದಿದೆ. ಶ್ರೇಷ್ಠವಾದ ಜ್ಞಾನದ ಕಣಜಗಳು ಬೇರೆ ಭಾಷೆಯಲ್ಲಿದ್ದರೆ ಅದನ್ನು ಪ್ರಯತ್ನಪೂರ್ವಕವಾಗಿ ಹೆಕ್ಕಿ ತೆಗೆದು ಆ ಮೂಲಕ ನಮ್ಮ ದೇಶೀಯರ ಸಾಮಾನ್ಯ ಜನರೆಲ್ಲರಿಗೂ ಮುಟ್ಟುವಂತಹ ಜ್ಞಾನವನ್ನು ಪಡೆಯುವುದು ಅವಶ್ಯವಾಗಿದೆ. ಹೀಗೆ ಕನ್ನಡ ಇಂಗ್ಲೀಷ್ ಭಾಷೆಗಳ ಬಗೆಗಿನ ವಿಚಾರಗಳನ್ನು ಗಮನಿಸಬಹುದು.

**೪. ಕನ್ನಡ ಭಾಷೆಗೆ ಆಧುನಿಕ ವ್ಯಾಕರಣ**

ಭಾಷೆಗೆ ಒಂದು ರೀತಿಯ ಅಚ್ಚುಕಟ್ಟನ್ನು ಶಿಸ್ತನ್ನು ಒದಗಿಸುವುದು ವ್ಯಾಕರಣ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರುಗಳು ಕನ್ನಡ ಭಾಷೆಗೆ ಹೊಸದಾದ ಒಂದು ವ್ಯಾಕರಣ ರಚನೆಯಾಗಬೇಕು ಎಂದು ಹೇಳಿದ್ದನ್ನು ಗಮನಿಸಬಹುದು. ಇಲ್ಲಿ ಯಾಕೆ ಕನ್ನಡಕ್ಕೆ ಹೊಸದಾದ ವ್ಯಾಕರಣ ಬೇಕು ಎಂದಿದ್ದಾರೆ? ಯಾಕೆಂದರೆ ಭಾಷೆ ದಿನ ದಿನಕ್ಕೆ ಬೆಳೆಯುತ್ತಲೇ ಇದೆ. ತನ್ನ ಹಳೆಯ ರೂಪಗಳನ್ನು, ಹಳೆಯ ಅರ್ಥಗಳನ್ನು ಕಳಚಿ ಹೊಸ ರೂಪ ಹೊಸ ಅರ್ಥಗಳನ್ನು ಧಾರಣೆ ಮಾಡಿಕೊಳ್ಳುತ್ತಿದೆ. ಪ್ರಪಂಚದ ಭಾಷೆಗಳೊಡನೆ ಸರಿಸಾಟಿಯಾಗಿ ನಿಲ್ಲಬೇಕೆಂದರೆ ತನ್ನತನ ಉಳಿಸಿಕೊಳ್ಳಲು ಇಂತಹ ಬದಲಾವಣೆಗಳು ಅವಶ್ಯಕ. ಒಂದು ಕಡೆ ಇಂಗ್ಲೀಷ್ ಭಾಷೆಯು ಕನ್ನಡವನ್ನು ಮೂಲೆಗೊತ್ತುತ್ತಿದೆ. ಎಂಬ ವಾದವಿದೆ. ಬಹುಶಃ ಇಂಗ್ಲೀಷ್

ಸರಳವಾದ ಭಾಷಿಕ ರಚನೆಯನ್ನು ಹೊಂದಿರುವ ಕಾರಣದಿಂದ ಅದು ಎಲ್ಲೆಡೆಯಲ್ಲಿಯೂ ಸರಾಗವಾಗಿ ಹರಿದಾಡಲು ಪ್ರಾರಂಭಿಸಿದ್ದಿರಬಹುದು ಮತ್ತು ಆಯಾ ಕಾಲಮಾನಕ್ಕೆ ತಕ್ಕಂತೆ ಅದು ಬೆಳೆಯುತ್ತಿರುವುದು ಕೂಡ ಕಾರಣವಾಗಿರಬಹುದು. ಬ್ರಿಟೀಷರ ಆಡಳಿತ ಕಾಲದಲ್ಲಿ ಎಲ್ಲೆಡೆಯಲ್ಲಿಯೂ ಈ ಪರ ಭಾಷೆಯೇ ರಾರಾಜಿಸುತ್ತಿತ್ತು ಮತ್ತು ಕೆಲವು ಕನ್ನಡ ಪಾಶ್ಚಾತ್ಯ ಮನಸ್ಸುಗಳು ಇದರ ವ್ಯಾಮೋಹಕ್ಕೆ ಒಳಗಾಗುತ್ತಿರುವುದನ್ನು ಗಮನಿಸಿ ನಮ್ಮ ಭಾಷೆಯಲ್ಲಿ ಇರುವ ನ್ಯೂನ್ಯತೆಗಳಾವುವು ಎಂಬುದನ್ನು ಪ್ರಶ್ನೆ ಹಾಕಿಕೊಂಡು ಕನ್ನಡದ ವಿದ್ವಾಂಸರುಗಳು ಕನ್ನಡ ಭಾಷಿಕ ರಚನೆಗೆ ಕಾರಣವಾದ ಈ ವ್ಯಾಕರಣವನ್ನು ಸರಳಗೊಳಿಸುವತ್ತ ಕಡೆ ತಮ್ಮ ಗಮನ ಹರಿಸಿದರು.

ನಮ್ಮ ಲಾಕ್ಷಣಿಕರು ತಮ್ಮ ರಚನೆಗಳನ್ನು ಸಂಸ್ಕೃತದ ದಟ್ಟವಾದ ಪ್ರಭಾವದಲ್ಲಿಯೇ ರಚಿಸಿದ್ದಾರೆ. ಆದ್ದರಿಂದ ಸಂಸ್ಕೃತದ ಭಾಷೆಯ ರಚನೆಯ ಅಂಶಗಳನ್ನು ಯಥಾವತ್ತಾಗಿ ಸ್ವೀಕರಿಸಿದ್ದು ಉಂಟು. ಇದರಿಂದ ತಮ್ಮ ಕಾವ್ಯಗಳ ಕೃತಿಗಳ ಪ್ರೌಢಿಮೆ, ವಿದ್ವತ್ತು ಕಾಪಾಡಿಕೊಳ್ಳುವುದು ಅವರ ಕಾಲದ ಒತ್ತಡವಾಗಿತ್ತು ಎಂಬುದನ್ನು ಮರೆಯುವಂತಿಲ್ಲ. ಅದರಲ್ಲಿಯೇ ಕನ್ನಡದ ಸ್ವಂತಿಕೆಯನ್ನು ಮೆರೆಯುವ ಪ್ರಯತ್ನ ಮಾಡಿದರು. ಆದರೆ ಕಾಲ ಬದಲಾದಂತೆ ಜನರ ಅಭಿರುಚಿಯು ಬದಲಾಗುತ್ತಾ ಬಂದಿತು. ಹಿಂದಣ ಈ ಕಾವ್ಯಗಳು ಜನರಿಂದ ದೂರ ಸರಿಯಲಾರಂಭಿಸಿದವು. ಇದಕ್ಕೆ ಕಾರಣ ಇವುಗಳಲ್ಲಿರುವ ಬಿಗಿಯಾದ ವ್ಯಾಕರಣ ಬಂಧಗಳೇ ಇರಬಹುದು. ಆಗ ತಾನೇ ಹೊಸತಾಗಿ ಬೀಸುತ್ತಿದ್ದ ಪಾಶ್ಚಾತ್ಯರ ಗಾಳಿ ಇದನ್ನು ಮತ್ತಷ್ಟು ಗಟ್ಟಿಗೊಳಿಸುತ್ತಾ ಬಂದಿತು. 'ಅವರ ಉತ್ಕೃಷ್ಟವಾದ ಗ್ರಂಥಗಳ ಲಕ್ಷಣವನ್ನಿಟ್ಟುಕೊಂಡು ಪರೀಕ್ಷೆ ಮಾಡಿದಾಗ ಸಂಸ್ಕೃತದ ಕೆಲವು ಗ್ರಂಥಗಳಲ್ಲಿಯೂ ನ್ಯೂನ್ಯತೆಗಳು ಕಾಣಬರುವುವು. ಇನ್ನು ಸಂಸ್ಕೃತ ಕೃತಿಗಳನ್ನೇ ಆದರ್ಶವಾಗಿಟ್ಟುಕೊಂಡು ಬರೆದಂತಹ ಕನ್ನಡ ಕೃತಿಗಳಲ್ಲಿಯೂ ಈ ನ್ಯೂನ್ಯತೆಗಳು ಇರದಿರಲಾರವು'.[೩೦] ನ್ಯೂನ್ಯತೆಗಳನ್ನು ತೊಡೆದು ಹಾಕಲು ಕನ್ನಡಕ್ಕೆ ಹೊಸದಾದ ಒಂದು ವ್ಯಾಕರಣ ರಚನೆ ಅವಶ್ಯ ಎಂಬುದು ಈ ಅಧ್ಯಕ್ಷರುಗಳ ಅಭಿಪ್ರಾಯವಾಗಿದೆ. ಈ ಹಿಂದಿನ ಶಬ್ದಮಣಿ ದರ್ಪಣ, ಛಂದೋಂಬುದಿ ಈ ಕೃತಿಗಳು ಹಿಂದಣ ಕನ್ನಡವನ್ನು ಸರಳಗೊಳಿಸಿದವು. ಆದರೂ ಇವುಗಳಲ್ಲಿರುವ ವ್ಯಾಕರಣಾಂಶಗಳು ಸಂಸ್ಕೃತ ಮೂಲದವೇ ಆಗಿವೆ. ಆದ್ದರಿಂದ ಹೊಸದಾದ ವ್ಯಾಕರಣ ರಚಿಸುವುದರಿಂದ ನಮ್ಮ ದೇಶೀಯ ಭಾಷೆಗಳಲ್ಲಿನ ಭಾಷಾ ಭೇದವನ್ನು ಅಳಿಸಿ ಹಾಕಿ ಹೊಸದಾದ ಶೈಲಿಯಲ್ಲಿ ಸಾಹಿತ್ಯ ರಚಿಸಬಹುದಾಗಿದೆ. ಹಳೆಯ ವ್ಯಾಕರಣಗಳು ವಿಪರೀತವಾದ ಸೂತ್ರಗಳು, ಸಂಧಿ, ಸಮಾಸ, ವರ್ಗೀಕರಣಗಳು ನೇರವಾಗಿ ಸಂಸ್ಕೃತದಿಂದ ಬಂದಂತವೇ ಆಗಿವೆ. ಭಾಷೆಗೆ ಒಂದು ನಿಯಮವಿರಬೇಕು ನಿಜ ಹಾಗೆಂದು ಇಂಥ ಬಿಗಿಯಾದ ಬಂಧನಕ್ಕೊಳಪಡಿಸಿದರೆ ಅದರ ಅಂಗಾಂಗಳ ಸ್ವತಂತ್ರ ಚಲನೆಯಿಲ್ಲದೆ ಬೆಳವಣಿಗೆ ಕುಂಠಿತವಾಗುತ್ತದೆ. ಭಾಷೆಯು ಹಿಂದಿಗಿಂತ ಇಂದು ಹೆಚ್ಚಾದ ಅವಸರದಿಂದ ಮತ್ತು ಆತುರದಿಂದ ಬೆಳೆಯತಕ್ಕದ್ದಾಗಿದೆ. ಇಂತಹ ಸಂಧಿ ಸಮಯದಲ್ಲಿ ಭಾಷೆಗೆ ಅಸಹನೀಯವೆಂದು ತೋರುವ ಕಟ್ಟುಗಳನ್ನು ಸಡಲಿಸಿ ಸರಳಗೊಳಿಸಬೇಕಾಗಿದೆ. ಈ ಹಿಂದಿನ ಶಬ್ದಮಣಿದರ್ಪಣ, ಶಬ್ದಾನುಶಾಸನ ಕಾಲದಿಂದ ಈಚೆಗೆ ಭಾಷೆಯಲ್ಲಿ ಎಷ್ಟೋ ವ್ಯತ್ಯಾಸಗಳಾಗಿವೆ. ಆದರೆ ಆ ವ್ಯತ್ಯಾಸಗಳನ್ನೇ ಪರೀಕ್ಷಿಸಿ ಅವುಗಳಲ್ಲಿರುವ ಲೋಪದೋಷಗಳನ್ನು ಎತ್ತಿತೋರಿಸುವ ಹೊಸ ವ್ಯಾಕರಣವು ಇನ್ನು ಹುಟ್ಟಬೇಕಾಗಿದೆ'.[೩೧] ಹೀಗೆ ಕನ್ನಡ ಭಾಷೆಗೆ ಹೊಸದಾದ ಒಂದು ವ್ಯಾಕರಣವು ಅವಶ್ಯಕವೂ ಅನಿವಾರ್ಯವೂ ಆಗಿದೆ ಎಂಬುದು ಅಧ್ಯಕ್ಷರ ವಾದ/ ಅಭಿಪ್ರಾಯವಾಗಿದೆ.

### ೫. ಆಡಳಿತ ಭಾಷೆ ಕನ್ನಡ

ಕರ್ನಾಟಕದ ಭಾಷೆ, ಸಾಹಿತ್ಯ ಬದುಕು ಎಲ್ಲವೂ ಕನ್ನಡವೇ ಆಗಿರುವಾಗ ಆಡಳಿತ ಭಾಷೆಯ ಬಗ್ಗೆ ಇರುವ ಬಿಕ್ಕಟ್ಟು/ ಸಮಸ್ಯೆ ಅಧ್ಯಕ್ಷೀಯ ಭಾಷಣಗಳಲ್ಲಿ ಕಂಡುಬರುತ್ತದೆ. ಏಕೆಂದರೆ ಆಗಿನ್ನೂ ಕರ್ನಾಟಕ ಏಕೀಕರಣವಾಗಿರಲಿಲ್ಲ. ಭಾಷಾವಾರು ಪ್ರಾಂತ ರಚನೆಯಾಗಿರಲಿಲ್ಲ. ಸರ್ಕಾರದಿಂದ ಕನ್ನಡಕ್ಕೊಂದು ಅಧಿಕೃತತೆ ದೊರಕಿರಲಿಲ್ಲ. ಹಾಗೆಂದು ಕನ್ನಡಕ್ಕೆ ಯಾವುದೇ ಸ್ಥಾನವಿರಲಿಲ್ಲವೆಂದಲ್ಲ. ಇದುವರೆಗೂ ಕನ್ನಡ ನಾಡು ಹಲವಾರು ಪರ ರಾಜ್ಯಗಳ, ಪರ ಭಾಷೆಗಳ ಆಕ್ರಮಣಕ್ಕೆ ಒಳಗಾಗುತ್ತಲೇ ಬಂದಿದೆ. ಬ್ರಿಟಿಷರ ಅಧಿಕಾರದ ಸಮಯದಲ್ಲಿ ಅವರೇ ಪ್ರಭುಗಳು ಅವರ. ಭಾಷೆಯೇ ಪ್ರಭುತ್ವ ಭಾಷೆಯಾಗಿತ್ತು. ಆದರೂ ಕೆಲವು ಕಡೆ ಕನ್ನಡವೇ ಆ ಕಾಲದಲ್ಲಿ ಆಡಳಿತ ಭಾಷೆಯಾಗಿತ್ತು ಎಂದು ತಿಳಿದು ಬರುತ್ತದೆ. ಆದರೆ ಅವರ ವಸಾಹತುಶಾಹಿಯ ಮನಸ್ಸು ಬಹಳ ಕಾಲ ಇದನ್ನು ಮುಂದುವರೆಯಲು ಬಿಡಲಿಲ್ಲ. ತಮ್ಮ ಅಧಿಕಾರವಿದ್ದಲ್ಲಿ ತಮ್ಮ ಭಾಷೆಯನ್ನೇ ಹೇರುವ ಕೆಲಸವನ್ನು ಮಾಡಿದರು. ಆ ಮೂಲಕ ಆಡಳಿತದಲ್ಲೆಲ್ಲ ಇಂಗ್ಲಿಷ್ ಭಾಷೆಯನ್ನೇ ಬಳಕೆಗೆ ತಂದರು. ಇದರಿಂದ ಜನಸಾಮಾನ್ಯರಿಗೆ ಅಧಿಕಾರಿಗಳೊಂದಿಗೆ ವ್ಯವಹರಿಸಲು ಕಷ್ಟವಾಯಿತು. 'ಇಂಗ್ಲಿಷ್‌ನ ಕೆಲಸ ನಡೆಯುವ ಸಂಸ್ಥೆಯಲ್ಲಿ ನಮ್ಮಲ್ಲಿ ಹಿರಿಯರಾದವರನೇಕರು ಆ ಭಾಷೆಯ ಪರಿಚಯವಿಲ್ಲದ ಕಾರಣ ಭಾಗಿಗಳಾಗಲಾರರು. ಸರ್ಕಾರ ಆಡಳಿತ ಇರುವುದು ಜನರಿಗಾಗಿ, ಅವರ ಅನುಕೂಲಕ್ಕಾಗಿ. ಆದರೆ ಕಾಯಿದೆ, ಕಾನೂನುಗಳು ಇರುವುದು ಅವರಿಗೆ ತಿಳಿಯದ ಭಾಷೆಯಲ್ಲಿ. ಇದರಿಂದ ಯಾವ ಪ್ರಯೋಜನವೂ ಇಲ್ಲ.[೩೨] ನ್ಯಾಯಾಲಯಗಳಲ್ಲಂತೂ ಇಂಗ್ಲಿಷ್ ಭಾಷೆಯೇ ಪ್ರಾಮುಖ್ಯತೆಯನ್ನು ಪಡೆದಿದೆ. 'ದೂರು ಹೊತ್ತೊಯ್ಯುವವನು ದೇಶಿಗನು. ಅದನ್ನು ಬರೆದುಕೊಳ್ಳುವುದು ಇಂಗ್ಲಿಷ್‌ನಲ್ಲಿ. ಲಾಯರುಗಳ ವಾದ ಇಂಗ್ಲಿಷಿನಲ್ಲಿ. ತೀರ್ಪು ಇಂಗ್ಲಿಷನಲ್ಲಿ. ಹೀಗಿದ್ದಾಗ ಅಲ್ಲಿ ಜನಸಾಮಾನ್ಯರಿಗೆ ವ್ಯವಹರಿಸಲು ಹೆಚ್ಚಿನ ತೊಂದರೆ. ಇದರಿಂದ ಇನ್ನೊಂದು ನಷ್ಟವಿದೆ. ಕೋರ್ಟು ಕಛೇರಿಗಳಲ್ಲಿ ನಾಗರಿಕನ ಕರ್ತವ್ಯಗಳು ಎಂಥವೆಂಬುದು ತಿಳಿಯಲು ಅನುಕೂಲವಾಗುತ್ತವೆ. ಆದರೆ ಅವು ಇಂಗ್ಲಿಷನಲ್ಲಿ ನಡೆಯುವುದರಿಂದ ನಮ್ಮ ಜನಕ್ಕೆ ಈ ಉಪಯೋಗ ಇಲ್ಲದಂತಾಗುತ್ತದೆ.[೩೩] ಆದ್ದರಿಂದ ಆಡಳಿತದಲ್ಲಿ ಕನ್ನಡವನ್ನು ಜಾರಿಗೊಳಿಸ ಬೇಕಾಗಿರುವುದು ಅವಶ್ಯವಾಗಿದೆ. ಈ ಮೇಲಿನ ಅಭಿಪ್ರಾಯ ಮಂಡಿಸಿದಾಗ ಕನ್ನಡವು ಇನ್ನು ಆಡಳಿತದಲ್ಲಿ ಬಂದಿರಲಿಲ್ಲ. ಅದನ್ನು ಆಡಳಿತ ಭಾಷೆಯನ್ನಾಗಿ ಮಾಡಬೇಕೆಂಬ ಅಭಿಪ್ರಾಯವಿದೆ. ಆದರೆ 'ಕನ್ನಡವನ್ನು ಸರ್ಕಾರದ ನಾನಾ ಇಲಾಖೆಗಳವರು ದೇಶ ಭಾಷೆಗೆ ಸಹಾಯ ಮಾಡಲು ಬಹು ವಿಧವಾದ ಅವಕಾಶಗಳನ್ನು ನೀಡಿದ್ದರೂ ಅವುಗಳಲ್ಲಿ ಭಾಷೆಯ ಒಳ್ಳೆಯ ಶೈಲಿಯಿಲ್ಲದಿರುವುದನ್ನು ಕಾಣಬಹುದಾಗಿದೆ.'[೩೪] ಆ ಕಾಲದ ಕಛೇರಿಯ ಕೆಲವು ಕಡತಗಳಲ್ಲಿನ ಕನ್ನಡ ಭಾಷೆಯನ್ನು ಗಮನಿಸಿದರೆ ಈ ಮಾತು ಸ್ಪಷ್ಟವಾಗುತ್ತದೆ. ಇಲ್ಲಿನ ಕನ್ನಡ ಭಾಷೆಯನ್ನು ನೋಡಿದಾಗ ಕನ್ನಡಿಗರಿಗೆ ಅದು ಯಾವ ಸೀಮೆಯ ಕನ್ನಡ ಎಂದೆನಿಸುವಂತಾಗುತ್ತದೆ. ಕನ್ನಡ ನಾಡಿನಲ್ಲಿ ಪ್ರಭುತ್ವಗಳೆಲ್ಲ ಕನ್ನಡ ಪ್ರಭುತ್ವಗಳಾಗಬೇಕು. ಸರಕಾರಗಳ ಸಕಲ ಕಾರ್ಯಕಲಾಪಗಳು ಕನ್ನಡ ಭಾಷೆಯ ಮೂಲಕವಾಗಿಯೇ ನಡೆಯಬೇಕು. ಇಂಥ ಸಂದರ್ಭದಲ್ಲಿ ದ್ವಿಭಾಷಾ ವ್ಯಾಪಾರವೇತಕ್ಕೆ? ತಾಲೂಕು ಮಾತನ್ನು ತೆಗೆದುಕೊಂಡರಂತೂ ಇಂಗ್ಲಿಷ ಮೂಲಕ ಆಡಳಿತವನ್ನು ನಡೆಸುವ ಆಚಾರವು ಎಷ್ಟು ಅಸಂಬದ್ಧ, ಅನ್ಯಾಯ ಎಂಬುದು ಸ್ಥಿರಪಡುತ್ತದೆ.'[೩೫] ಆದರೆ ಕನ್ನಡದ ಮೂಲಕವೇ ಕರ್ನಾಟಕದ ಮೋಕ್ಷ. ಕರ್ನಾಟಕದ ರಾಷ್ಟ್ರ ಭಾಷೆ

ಕನ್ನಡ ಎಂಬುದು ತಿ.ತಾ. ಶರ್ಮರ ವಾದ. ಈ ವಾದ ಕನ್ನಡಿಗರು ಎನಿಸಿಕೊಂಡವರೆಲ್ಲರ ವಾದವೂ ಆಗಿದೆ.

'ಆಡಳಿತ ಸೌಕರ್ಯ ಎಂಬುದು ಯಾರ ಸಲುವಾಗಿದೆ? ಜನಗಳಿಂದ ಅಧಿಕಾರ ಪಡೆಯುವ ಜನ ಯಾರ ಸಲುವಾಗಿ ದುಡಿಯಬೇಕು? ಯಾರ ಹಿತ ನೋಡಬೇಕು? ಏಳು ಸಾವಿರ ಮೈಲು ದೂರದ ಬ್ರಿಟನ್ನಿನಿಂದ ಅಂದು ಆಳಿದವರ ಆಡಳಿತೆಯ ದೃಷ್ಟಿ ಅದಕ್ಕೆ ಒದಗಿ ಬಂದ ಭಾಷೆ ಮೇರೆಗಳು ಇನ್ನೂ ಉಳಿಯಬೇಕೆ? ದೇಶದಲ್ಲಿ ಸಮಾಜ ಬೆಳೆಯುವುದು ಹುಟ್ಟುವುದು ಸಂಪರ್ಕದಿಂದ ಮತ್ತು ವಿಚಾರ ವಿನಿಮಯದಿಂದ. ಅದಕ್ಕೆ ಭಾಷೆಯೇ ಮಾಧ್ಯಮ. ಶೇಕಡ ೧೫ರಷ್ಟು ಓದು ಬರಹವನ್ನರಿತ ಜನರುಳ್ಳ (ಈಗ ಪ್ರಮಾಣ ಹೆಚ್ಚಾಗಿದೆ) ಈ ದೇಶದಲ್ಲಿ ಆಡಳಿತೆಯ ಭಾಷೆ ಯಾವುದಾಗಬೇಕು? ಆಡಳಿತೆ ಭಾಷೆ ಯಾವುದು? ವಿದ್ಯಾಭ್ಯಾಸ ಭಾಷೆ ಯಾವುದು? ಕೋರ್ಟು ಕಛೇರಿಗಳ ಭಾಷೆ ಯಾವುದು? ಪ್ರಜಾಪ್ರಭುತ್ವವನ್ನು ಯಶಸ್ವಿಯಾಗಿ ಮಾಡಬಲ್ಲ ಭಾಷೆ ಯಾವುವು? ಕನ್ನಡ ಜಗತ್ತಿನ ಪಾಲಿಗೆ ಅದು ಕನ್ನಡ ಅದೊಂದೆ. ಇಂಗ್ಲಿಷ್ ಅಲ್ಲ ಹಿಂದಿ ಅಲ್ಲ ಕನ್ನಡ ನಾಡಿನ ಜನಕ್ಕೆ ಕನ್ನಡವೊಂದೇನೆ'.[೩೬] ಈ ವಿವರಣೆಯಲ್ಲಿ ಕನ್ನಡದ ಗಟ್ಟಿಯಾದ ಸತ್ವವುಳ್ಳ ಮನೋಭಾವ ಗೋಚರಿಸುತ್ತದೆ. 'ಭಾಷೆ' ಯಾರಿಗೆ, ಏಕೆ ಎನ್ನುವುದನ್ನು ಈ ಮೇಲಿನ ವಿವರಣೆ ಸ್ಪಷ್ಟಪಡಿಸುತ್ತದೆ. ಭಾಷೆಗಳ ಹೋರಾಟದ ಕಾಲದಲ್ಲಿ ಕನ್ನಡತನದ ಅಸ್ಮಿತೆಯು ಉಳಿದಿರುವುದು ಇಂತಹ ಕಾಳಜಿಪರ ವಿಚಾರಗಳಿಂದಲೇ ಎಂದು ಹೇಳಬಹುದು.

ಕೆಲವು ಬ್ರಿಟೀಷ್ ಅಧಿಕಾರಿಗಳು ಸಹ ಕನ್ನಡವು ಆಡಳಿತ ಭಾಷೆಯಾಗಬೇಕೆಂದು ತಮ್ಮ ಸರ್ಕಾರಗಳಿಗೆ ಒತ್ತಾಯಪಡಿಸಿದ್ದಂಟು. ಸರ್ ವಾಲ್ಟರ್ ಎಲಿಯಟ್ 'ಇಲ್ಲಿಯ ಬಹುತೇಕ ಜನರ ಭಾಷೆ ಕನ್ನಡ ಆಗಿರುವುದರಿಂದ ಕನ್ನಡವೇ ಆಡಳಿತ ಭಾಷೆಯಾಗುವುದು ಸೂಕ್ತ ಎಂದು ಧಾರವಾಡದಲ್ಲಿ ಕನ್ನಡ ಶಾಲೆಯೊಂದನ್ನು ಸ್ಥಾಪಿಸಲು, ತಾನೇ ೧೮೩೦ರಲ್ಲಿ ಅರ್ಜಿ ಸಲ್ಲಿಸಿದನು. ೧೮೩೭ರಲ್ಲಿ ಜಾನ್ ಎ. ಡನ್‌ಲಪ್ ಬೆಳಗಾವಿಯ ಜಿಲ್ಲಾಧಿಕಾರಿಯಾಗಿದ್ದನು. ಧಾರವಾಡದ ಸಂದರ್ಶಕ ನ್ಯಾಯಾಂಗ ಕಮೀಷನರ್ ಅವರಿಗೆ ೨೦.೦೪.೧೮೩೭ರಂದು ಬರೆದಿರುವ ಪತ್ರದಲ್ಲಿ ಬೆಳಗಾವಿಯಲ್ಲಿ ಜಿಲ್ಲೆಯಾದ್ಯಂತ ಕನ್ನಡವನ್ನೇ ಆಡಳಿತ ಹಾಗೂ ವ್ಯವಹಾರ ಭಾಷೆಯನ್ನಾಗಿ ಜಾರಿಗೆ ತರಲು ಆದೇಶ ಹೊರಡಿಸಿರುವುದನ್ನು ತಿಳಿಯಬಹುದು. ಅಂತೆಯೇ ಆಗಿನ ಮುಂಬೈ ಗೌವರ್ನರ್ ಆರ್. ಗ್ರಾಂಟ್ ೧೯.೦೯.೧೮೩೭ರ ಪತ್ರವು ಕನ್ನಡಕ್ಕೆ ದೊರೆಯಲೇಬೇಕಾದ ಪ್ರಾಶಸ್ತ್ಯದ ಬಗ್ಗೆ ಮನವರಿಕೆ ಮಾಡಿದೆ.[೩೭]

ಹೀಗೆ ಬ್ರಿಟೀಷ್ ಅಧಿಕಾರಿಗಳು ಸಹ ಆಡಳಿತ ಮತ್ತು ವ್ಯವಹಾರಲ್ಲಿ ಕನ್ನಡವನ್ನು ಜಾರಿಗೊಳಿಸಬೇಕೆಂದು ಪ್ರಯತ್ನಿಸಿರುವುದನ್ನು ಗಮನಿಸಬಹುದಾಗಿದೆ.

ಒಟ್ಟಾರೆಯಾಗಿ ಈ ಮೂರು ಸಂಪುಟಗಳಲ್ಲಿನ ಅಧ್ಯಕ್ಷೀಯ ಭಾಷಣಗಳಲ್ಲಿ ಕನ್ನಡ ಭಾಷೆಯು ಕರ್ನಾಟಕದಲ್ಲಿ ಆಡಳಿತ ಭಾಷೆಯಾಗಬೇಕು, ಕನ್ನಡವೇ ಸರ್ವಕಾಲಕ್ಕೂ ಇಲ್ಲಿನ ಅಧಿಕೃತವಾದ ಭಾಷೆ ದೇಶೀಯವಾದಿಗಳು ಮತ್ತು ಕೆಲವು ಪುರಾತತ್ವವಾದಿಗಳು ಇದಕ್ಕಾಗಿ ಶ್ರಮಿಸಿರುವುದನ್ನು ಕಾಣಬಹುದು. ಹೀಗೆ ಕನ್ನಡ ಭಾಷೆಯು ವಿಸ್ತರಿಸಬಹುದಾದ ಮತ್ತು ಅದಕ್ಕಿರುವ ಅಡ್ಡಿ ಆತಂಕಗಳನ್ನು ವಿವರವಾಗಿ ಚರ್ಚಿಸಿದ್ದಾರೆ.

## ೬. ಕನ್ನಡ ಭಾಷಾಭಿವೃದ್ಧಿ

ಕರ್ನಾಟಕ ಸಾಹಿತ್ಯ ಪರಿಷತ್ತು ಆರಂಭವಾದಾಗಿನಿಂದ, ಏಕೀಕರಣ ನಂತರದವರೆಗಿನ ಈ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣದಲ್ಲಿ ಭಾಷೆಯ ಮೂಲಕ ನಾಡಿನ ಏಕೀಕರಣದ ಧ್ವನಿಯನ್ನು ಮೊಳಗಿಸಿದ್ದನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ಕನ್ನಡ ಭಾಷೆಯ ಸ್ಥಿತಿಗತಿ ಬಗ್ಗೆಯೂ ತಮ್ಮ ಗಮನ ಹರಿಸಿದ್ದಾರೆ. ಕರ್ನಾಟಕದಲ್ಲಿ ಕನ್ನಡ ಭಾಷೆಯು ಯಾವ ಸ್ಥಿತಿಯಲ್ಲಿದೆ ಆ ಸ್ಥಿತಿಯೊದಗಲು ಕಾರಣವೇನು? ಅದನ್ನು ಅಭಿವೃದ್ಧಿಪಡಿಸಬೇಕೆಂದರೆ ಯಾವ ಕ್ರಮಗಳನ್ನು ಅಳವಡಿಸಿಕೊಳ್ಳಬೇಕೆಂದು ಹೇಳಿದ್ದಾರೋ ಂತ ವಿಚಾರಗಳನ್ನು ಇಲ್ಲಿ ಗಮನಿಸಲಾಗಿದೆ. ಸಾವಿರಾರು ವರ್ಷಗಳ ಇತಿಹಾಸ ಪ್ರಾಚೀನತೆಯುಳ್ಳ ಕನ್ನಡ ಭಾಷೆಯು ಅವಸಾನದ ಸ್ಥಿತಿಗೆ ಬಂದಿದೆ ಎಂದು ಭಾಗಶಃ ಎಲ್ಲರ ಭಾಷಣಗಳಲ್ಲಿ ಧ್ವನಿತವಾಗಿದೆ. ಹಾಗಾದರೆ ಅಷ್ಟು ಇತಿಹಾಸ ಉಳ್ಳಂತಹ ಗಟ್ಟಿಯಾದ ಬೇರುಗಳುಳ್ಳ ಕನ್ನಡ ಭಾಷೆಯು ಆ ಸ್ಥಿತಿಗೆ ಬರಲು ಕಾರಣವೇನು? ಎನ್ನುವ ಪ್ರಶ್ನೆಗೆ ಭಾಷಣಗಳಲ್ಲಿ ಉತ್ತರವನ್ನು ಹುಡುಕುವುದಾದರೆ ಕನ್ನಡಿಗರಿಗೆ ತಮ್ಮ ಭಾಷೆಯಲ್ಲಿರಬೇಕಾದ ಆದಾರತಿಶಯಕ್ಕೆ ಪ್ರತಿಯಾಗಿ ಅಸಡ್ಡೆ ನೆಲೆಗೊಂಡಿರುವುದು ಪ್ರಮುಖ ಕಾರಣ ಎನ್ನುವುದು ತಿಳಿಯುತ್ತದೆ.

ಪ್ರತಿಯೊಬ್ಬ ವ್ಯಕ್ತಿಗೂ ಭಾಷೆಯೆಂಬುದು ಉಸಿರಿನಷ್ಟು ಅವಶ್ಯಕ. ತನ್ನ ಭಾವನೆಗಳನ್ನು ಅನುಭವಗಳನ್ನು ಯಾವ ಭಾಷೆಯಿಂದ ಸರಳವಾಗಿ ಅಭಿವ್ಯಕ್ತಿಸುತ್ತಾನೋ ಆ ಭಾಷೆಯ ಬಗ್ಗೆ ತನಗೆ ಗೊತ್ತಿಲ್ಲದಂತೆಯೇ ಅಭಿಮಾನವು ರೂಪಗೊಳ್ಳುವುದು ಸಹಜವಾಗಿದೆ. ಈ ಸಂದರ್ಭದಲ್ಲಿ ಭಾಷೆಗೆ ತೊಂದರೆಗಳು, ಅಪಾಯಗಳು ಸಮಸ್ಯೆಗಳು ಉಂಟಾಗುತ್ತಿವೆ ಎಂದು ಗೊತ್ತಾದಾಗ ಅಲ್ಲಿ ಕೆಲಸ ಮಾಡುವುದು ವ್ಯಕ್ತಿಯ ಆ ಅಭಿಮಾನ ಆದರೆ ಇಲ್ಲಿ ಕನ್ನಡಿಗರಿಗೆ ಇರಬೇಕಾದಂತಹ ಆದರ ಅಭಿಮಾನಗಳು ಕಡಿಮೆಯಾಗುತ್ತಿವೆ. ಕಾರಣ ಆ ಸ್ಥಾನದಲ್ಲಿ ಮತ್ತೊಂದು ಭಾಷೆ ತುಂಬಿಕೊಳ್ಳುತ್ತಿದೆ. ಆ ಸಂದರ್ಭದಲ್ಲಿ ಕನ್ನಡ ಭಾಷೆಯಲ್ಲಿ ಮಾತನಾಡುವುದು ಶಿಕ್ಷಣ ಪಡೆಯುವುದು ಅಪಮಾನಕರ ಎಂಬಂತೆ ಭಾವಿಸಲಾಗುತ್ತಿದೆ. ಇದೂವರೆಗೂ ಒಂದು ಅಸ್ತಿತ್ವವನ್ನು ತಂದು ಕೊಟ್ಟಂತಹ ಭಾಷೆ ಮತ್ತೊಂದು ಭಾಷೆಯ ಮುಂದೆ ತುಂಬಾ ಸಣ್ಣದಾಗಿದೆ ಎನ್ನುವ ಮನೋಧರ್ಮವೇ ಇದಕ್ಕೆ ಕಾರಣವಿರಬಹುದು.

ಆದರೆ ಗಾಂಧೀಜಿಯವರು ಒಂದು ಕಡೆ ಹೇಳುವಂತೆ 'ತಾವು ಇಂಗ್ಲೀಷ್ ಶಿಕ್ಷಣ ಪಡೆದ ಏಳು ವರ್ಷಗಳ ಕಾಲ ಗುಜರಾತಿ ಭಾಷೆಯಲ್ಲಿ ತಮ್ಮ ಶಿಕ್ಷಣ ಪಡೆದು ತಮ್ಮ ನೆರೆಯವರಿಗೂ ಆ ತಿಳಿವನ್ನು ಸುಲಭವಾಗಿ ಹಂಚಬಹುದಾಗಿತ್ತು. ಆ ಮೂಲಕ ಗುಜರಾತಿ ಸಾಹಿತ್ಯವನ್ನು ಬೆಳೆಸಬಹುದಾಗಿತ್ತು. ಜನತೆಗೆ ಇನ್ನೂ ಹೆಚ್ಚಿನ ಸೇವೆ ಸಲ್ಲುತ್ತಿತ್ತು'[೩೮] ಎಂದು ಹೇಳುತ್ತಾರೆ. ಅಂದರೆ ಇಲ್ಲಿ ಅವರ ಭಾಷೆಯ ಬಗೆಗಿನ ಅಭಿಮಾನ ಮತ್ತು ಮಮತೆ ಕೆಲಸ ಮಾಡಿದೆ ಎಂದು ಹೇಳಬಹುದು. ಇಲ್ಲಿ ಮತ್ತೊಂದು ಕಾರಣವನ್ನು ಗುರುತಿಸುವುದಾದರೆ ಇಂಗ್ಲೀಷ್ ಬಲ್ಲವರೇ ಬುದ್ಧಿವಂತರು. ದೇಶ ಭಾಷಾ ಪಂಡಿತರು ಅಪ್ರಯೋಜಕರು ಎಂಬ ಭಾವನೆ ಇದರ ಹಿಂದೆ ಇದೆ. ಒಂದು ಭಾಷೆಯ ಬಗೆಗಿನ ವ್ಯಾಮೋಹ ತನ್ನ ಭಾಷೆಯ ಬಗ್ಗೆಯೇ ಅನುಮಾನದಿಂದ ಅದು ಅಪ್ರಯೋಜಕ, ಅದನ್ನು ಕಲಿತವರು ಕೂಡಾ ಅಪ್ರಯೋಜಕರು ಎಂದು ಎನಿಸಬೇಕಾದರೆ ನಮ್ಮ ಭಾಷೆ ಇಂಗ್ಲೀಷ್ ಭಾಷೆಗೆ ಸರಿದೊರೆಯಾಗಿ ನಿಲ್ಲಲಿಕ್ಕೆ ಯಾಕೆ ಸಾಧ್ಯವಾಗುತ್ತಿಲ್ಲ

ಎನ್ನುವುದು ಮುಖ್ಯವಾದ ಪ್ರಶ್ನೆ. ಅದಕ್ಕೆ ಉತ್ತರವನ್ನು ಸರಳವಾಗಿಯೇ ಗ್ರಹಿಸಬಹುದು.

ಇಲ್ಲಿ ಕನ್ನಡ ಭಾಷೆ ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದ್ದರೂ ಅದು ಬೆಳೆದು ಬಂದಿರುವುದು/ ಬರುತ್ತಿರುವುದು ಕರ್ನಾಟಕ ಎಂಬ ಭೌಗೋಳಿಕ ಎಲ್ಲೆಯೊಳಗೆ. ಕರ್ನಾಟಕವು ಗ್ರೀಕ್, ಚೀನಾ ಇತ್ಯಾದಿ ದೇಶಗಳ ಜೊತೆಗೆ ವ್ಯಾಪಾರ ವಹಿವಾಟನ್ನು ಇಟ್ಟುಕೊಂಡಿತ್ತು ಎನ್ನುವುದನ್ನು ಚರಿತ್ರೆಯಲ್ಲಿ ಗುರುತಿಸಬಹುದು. ಆದರೆ ಅಲ್ಲಿ ಕ್ವಚಿತ್ತಾಗಿ ಕನ್ನಡ ಭಾಷೆಯ ಬಳಕೆಯನ್ನು ಕಾಣಬಹುದು. ಈ ನಿಟ್ಟಿನಲ್ಲಿ ನೋಡುವುದಾದರೆ ಒಂದು ಚೌಕಟ್ಟಿನಲ್ಲಿಯೇ ತನ್ನ ಮಿತಿಯಲ್ಲಿಯೇ ಕನ್ನಡವು ಬೆಳೆದು ಬಂದಿರುವುದನ್ನು ಗಮನಿಸಬಹುದು. ಆದರೆ ಇಂಗ್ಲೀಷ್ ಭಾಷೆ ಹಾಗಲ್ಲ. ತಾನು ಹೋದ ಕಡೆಗಳಲ್ಲಿ ಅಲ್ಲಿನ ಭಾಷಿಕ ಸತ್ವವನ್ನು ಹೀರಿಕೊಳ್ಳುತ್ತಲೇ ಪುಷ್ಟವಾಗುತ್ತಾ ಬೆಳೆದಿದೆ/ಬೆಳೆಯುತ್ತಿದೆ. ಅದು ಜಗತ್ತಿನ ಮುಕ್ಕಾಲು ಪಾಲು ಭಾಷೆಗಳ ಪದಗಳನ್ನು ತನ್ನ ಒಡಲಲ್ಲಿ ಜೀರ್ಣಿಸಿಕೊಳ್ಳುತ್ತಾ ಹೊಸ ಶಕ್ತಿಯನ್ನು ಪಡೆಯುತ್ತಿದೆ. ಒಂದು ವೇಳೆ ಕನ್ನಡವು ಜಗತ್ತಿನ ವ್ಯವಹಾರ ಭಾಷೆಯಾಗಿದ್ದರೆ ಇಂಗ್ಲೀಷಿನಂತೆ ಬೆಳೆಯುತ್ತಿತ್ತು ಎಂದರೆ ತಪ್ಪಾಗಲಾರದು. ಕನ್ನಡವೂ ಪರ ಭಾಷೆಗಳ ನಿರಂತರ ದಾಳಿಯನ್ನು ಎದುರಿಸುತ್ತಾ ಬಂದರೂ ಆ ಭಾಷೆಗಳಲ್ಲಿನ ಹಲವಾರು ಪದಗಳನ್ನು ಕೆಲವನ್ನು ನೇರವಾಗಿ ಕೆಲವೊಂದನ್ನು ರೂಪಾಂತರಗೊಳಿಸಿಕೊಳ್ಳುವುದರ ಮೂಲಕ ತನ್ನಲ್ಲಿ ವಿಲೀನಗೊಳಿಸಿಕೊಳ್ಳುತ್ತಾ ಬಂದಿದೆ.

'ಪರಭಾಷೆಗಳ ಅನಿಯಂತ್ರಿತ ಪ್ರತಿಷ್ಠೆಯು ಬೆಳೆಯುತ್ತಾ ಹೋದ ಹಾಗೆ ಅವು ನಮ್ಮ ಜನ್ಮ ಭಾಷೆಯನ್ನು ನಮ್ಮ ಅಡಿಗೆಯ ಮನೆಯಿಂದಲೂ ದೇವರ ಕೋಣೆಯಿಂದಲೂ ಹೊರದೂಡುತ್ತವೆ'[೩೯] ಇಲ್ಲಿ ಭಾಷೆ ಕೇವಲ ವ್ಯವಹಾರಿಕ ಸಾಧನ ಮಾತ್ರ ಅಲ್ಲ. ಅದು ಸಂಸ್ಕೃತಿಯ ಕುರುಹು ಕೂಡಾ ಆಗಿರುತ್ತದೆ. ಇಲ್ಲಿ ಅಡಿಗೆ ಮನೆ ಮತ್ತು ದೇವರ ಮನೆಗಳು ಕೇವಲ ಭೌತಿಕ ಕಟ್ಟಡಗಳು ಎಂದು ಭಾವಿಸಲಾಗುವುದಿಲ್ಲ. ಅಡುಗೆ ಮನೆ ಎಂಬುದು ಒಟ್ಟಾರೆ ಒಂದು ಕುಟುಂಬವು ಕುಳಿತು ದಿನದ ಅನುಭವಗಳನ್ನು ಹಂಚಿಕೊಳ್ಳುವ ಒಂದು ಆತ್ಮೀಯ ಪರಿಸರವನ್ನು ಸೃಷ್ಟಿ ಮಾಡಿ ಕೊಡುವಂತದ್ದಾಗಿದೆ. ದೇವರ ಕೋಣೆಗಳು ಆಧ್ಯಾತ್ಮಿಕ ಪರಿಸರವನ್ನು ಕಟ್ಟಿಕೊಡುವಂತಹದ್ದಾಗಿದೆ. ಈ ಸಂದರ್ಭದಲ್ಲಿ ಕುಟುಂಬದ ಜನರು ಅಲ್ಲಿ ಬಳಸುವ ಭಾಷೆ ತಮ್ಮ ತಾಯ್ನುಡಿಯೇ ಆಗಿರುತ್ತದೆ. ಅಷ್ಟೇ ಅಲ್ಲದೇ ಇಂಡಿಯಾ ದೇಶವು ಹೇಗೋ ಹಾಗೆಯೇ, ಕರ್ನಾಟಕವು ಬಹು ಭಾಷಿಕ, ಬಹು ಜನಾಂಗಿಕ ಬಹು ಧರ್ಮೀಯ, ಬಹು ಸಂಸ್ಕೃತಿಗಳ ನಾಡು. ಇಲ್ಲಿ ಕನ್ನಡಕ್ಕೆ ಹೆಚ್ಚಿನ ಪ್ರಾಧಾನ್ಯತೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಕನ್ನಡ ಇರಬೇಕಾದುದು ಸರ್ವಸಮ್ಮತವಾಗಿದೆ. ಅದನ್ನು ಬಿಟ್ಟು ಅಡಿಗೆರಗಿ ಬಂದವರೇ ಆಳಿಸಿಕೊಂಡಂತೆ ಪರ ಭಾಷೆಗಳು ತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸುತ್ತಿವೆ. ಹಾಗಾದರೆ 'ಈ ನಾಡಿನಲ್ಲಿ ಹೊರ ಪರಭಾಷೆಗಳಿಗೆ ಪ್ರತಿಷ್ಠಿತ ಸ್ಥಾನವನ್ನು ಕೊಡುವವರು ಯಾರು? ಈ ನಾಡವರೇ ಅವುಗಳಿಗೆ ಅವಕಾಶ ಕೊಡುತ್ತಿರುವವರು. ನಮ್ಮ ಭಾಷೆಯಲ್ಲಿರುವುದೇನು? ಇಂಗ್ಲೀಷಿನ ಮುಂದೆ ಕನ್ನಡವೂ ಒಂದು ಭಾಷೆಯೇ! ಇಂಗ್ಲೀಷ್ ಜೀವಕಳೆಯಿಂದ ಕೂಡಿರುವ ಭಾಷೆ ಕನ್ನಡ ಸತ್ವವಡಗುತಲಿರುವ ಭಾಷೆ ಎಂದು ಎಣಿಸುವ ಮಂಕು ನಮ್ಮನ್ನು ಬಲವಾಗಿ ಹಿಡಿದಿದೆ.'[೪೦] ಇದರಿಂದ ನಮ್ಮ ಭಾಷೆಯು ಹೇಗೆ ತಾನೇ ಬದುಕಬೇಕು? ಕನ್ನಡ ಸತ್ವವೇ ಕುಂದಿ ಹೋಗುತ್ತಿದೆ. ಹಾಗಾದರೆ ಸತ್ವವನ್ನು ಕೊಡುವವರು ಯಾರು? ಈ ಕೆಲಸ ಆಗಬೇಕಾದದ್ದು ಯಾರಿಂದ?

ಕನ್ನಡಿಗರಿಂದ ತಾನೆ? ಹಾಗಾದರೆ ಕನ್ನಡಿಗರು ಮಾಡಬೇಕಾದ ಕೆಲಸವೇನು? ಭಾಷೆಯನ್ನು ಈ ಸ್ಥಿತಿಯಿಂದ ಪಾರು ಮಾಡಲು ಸಮ್ಮೇಳನ ಅಧ್ಯಕ್ಷರುಗಳು ಯಾವ ಸಲಹೆಗಳನ್ನು ನೀಡಿದ್ದಾರೆ ಎಂಬುದನ್ನು ಗಮನಿಸೋಣ. ಇಲ್ಲಿ ಒಂದು ಅಂಶವನ್ನು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ. ಅದೇನೆಂದರೆ ಈ ಸಮ್ಮೇಳನಗಳು ಸ್ವತಂತ್ರ ಪೂರ್ವ ಏಕೀಕರಣದ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯ ನಂತರ ಏಕೀಕರಣದ ನಂತರವೂ ನಡೆದ, ನಡೆಯುತ್ತಲಿರುವ ಸಮ್ಮೇಳನಗಳಾಗಿವೆ. ಆದ್ದರಿಂದ ಮುಂಚಿನ ಆರಂಭದ ಸಾಹಿತ್ಯ ಸಮ್ಮೇಳನಗಳು ನಾಡು ಏಕೀಕರಣಗೊಳ್ಳದ ಹೊರತು ಭಾಷಾಭಿವೃದ್ಧಿಯಾಗಲು ಸಾಧ್ಯವಿಲ್ಲ ಎಂದು ಹೇಳುತ್ತಿದ್ದುದನ್ನು ಗಮನಿಸಬೇಕು.

ಕರ್ನಾಟಕವು ಭಾಷಿಕವಾಗಿ, ಭೌಗೋಳಿಕವಾಗಿ, ಭಾವನಾತ್ಮಕವಾಗಿ ಒಂದಾಗದ ಹೊರತು ಯಾವುದೇ ಅಭಿವೃದ್ಧಿಯನ್ನು ಕಾಣಲು ಸಾಧ್ಯವಿರಲಿಲ್ಲ. 'ಅಂತೆಯೇ ಭಾಷಾಭಿವೃದ್ಧಿಗೆ ಆ ಭಾಷೆಯು ವ್ಯಾಪಿಸಿಕೊಂಡಿರುವ ನಾಡೆಲ್ಲಾ ಒಂದೇ ಅಧಿಪತ್ಯಕ್ಕೆ ಒಳಗಾಗಿರಬೇಕು'[೪೧] ಎಂದಿರುವುದನ್ನು ಕಾಣಬಹುದು. ಕರ್ನಾಟಕವು ಹತ್ತು ಹಲವು ರಾಜರ, ಮಾಂಡಲಿಕರ ಆಡಳಿತಕ್ಕೆ ಒಳಗಾಗುತ್ತಲೇ ಬಂದಿದೆ. ಈ ಸಂದರ್ಭದಲ್ಲಿ ಆಯಾ ಸಂಸ್ಥಾನಗಳ ಆಡಳಿತದ ವ್ಯಾಪ್ತಿಗನುಗುಣವಾಗಿ ಚದುರಿ ಹೋಗಿ ಅಲ್ಲಿನ ಭಾಷೆ, ವ್ಯವಹಾರ, ಜನಜೀವನ ಈ ಎಲ್ಲವನ್ನು ಆಳುವ ವರ್ಗ ತನ್ನ ಹಿತಾಸಕ್ತಿಗನುಗುಣವಾಗಿಯೇ ನಿಯಂತ್ರಿಸುತ್ತಿತ್ತು ಎಂಬುದನ್ನು ಮರೆಯುವಂತಿಲ್ಲ. ಈ ಸಂದರ್ಭದಲ್ಲಿ ಪ್ರಾಂತ್ಯಗಳೆಲ್ಲಾ ಒಕ್ಕಟ್ಟಾಗಿ ಇದ್ದಾಗ ಮಾತ್ರ ಭಾಷಾಭಿವೃದ್ಧಿ ಸಾಧ್ಯವಾಗುತ್ತದೆ. ಅಲ್ಲದೇ ಕರ್ನಾಟಕವು ಪ್ರಾದೇಶಿಕವಾಗಿ ಭಿನ್ನತೆಗಳಿಂದ ಕೂಡಿರುವಂತಹ ನಾಡು ಕರ್ನಾಟಕದಾದ್ಯಂತ ಬಳಸುವ ಭಾಷೆ ಏಕ ತೆರನಾಗಿಲ್ಲ. ಆಯಾ ಪ್ರದೇಶಗಳು ತಮಗೆ ಅನುಕೂಲವಾಗುವಂತಹ ರೂಢಿ, ಸಂಪ್ರದಾಯ, ಆಚರಣೆಗಳಲ್ಲಿ ಬಂದಿರುವಂತಹ ಭಾಷೆಯನ್ನು ಬಳಸುತ್ತಾ ಬೆಳೆಸುತ್ತಾ ಬಂದಿರುವುದನ್ನು ಕಾಣುತ್ತೇವೆ. ಇಲ್ಲಿ ಆ ಪ್ರಾಂತ್ಯಗಳ ಅಧಿಕಾರಿ ವರ್ಗಗಳು ಸಮಾಜವನ್ನು ನಿಯಂತ್ರಿಸುತ್ತಾ ಬರುತ್ತಿದ್ದವು. ಈ ಸಂದರ್ಭದಲ್ಲಿಯೂ ಕನ್ನಡವೂ ತನ್ನ ಸ್ವಂತಿಕೆಗಾಗಿ ಹೆಣಗಾಡುತ್ತಿತ್ತು. 'ಇಂತಹ ಪ್ರಾದೇಶಿಕ ಅಥವಾ ಪ್ರಾಂತೀಯ ಭಾಷೆಗಳಿಗೆ ಬಾಧೆ ಬರದಂತೆ ಇವುಗಳಿಗೆ ಎಲ್ಲಿಯೂ ಹಾನಿಯಾಗದಂತೆ ಉತ್ತಮ ಸ್ಥಾನವನ್ನು ಕಲ್ಪಿಸಿ ಕೊಡಬೇಕು. ಆಯಾ ಪ್ರಾಂತ್ಯಗಳಲ್ಲಿರುವ ಅಲ್ಪಸಂಖ್ಯಾತ ಭಾಷೆಗಳಿಗೂ ಸ್ಥಾನವನ್ನು ಕೊಡಬೇಕು, ಎಂದು ಕೆಲವು ಭಾಷಣಗಳಲ್ಲಿ ವ್ಯಕ್ತವಾಗಿದೆ.

'ಭಾಷಾಭಿವೃದ್ಧಿಗೆ ದೇಶದಲ್ಲಿ ಅಂತಃಕಲಹಗಳು ಇತರ ವಿಧದ ಕ್ಷೋಭೆಗಳಾವುವು ಇಲ್ಲದೇ ಶಾಂತಿ ನೆಲೆಸಿರಬೇಕು. ಹಗೆಗಳ ಹಾವಳಿ ಹೆಚ್ಚಾದರೆ ಜನರು ತಮ್ಮ ದೇಶ ಸಂರಕ್ಷಣಾರ್ಥವಾಗಿಯೂ ದೇಹ ಸಂರಕ್ಷಾರ್ಥವಾಗಿಯೂ ಚಿಂತಿಸಬೇಕಾದುದರಿಂದ ಅವರ ಮನಸ್ಸು ದೇಶ ಭಾಷೆಗಳ ಕಡೆಗೆ ಓಡದು'[೪೨] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯದ ಮೂಲಕ ನಾವು ಒಂದು ಸೂಕ್ಷ್ಮವಾದ ಅಂಶವನ್ನು ಗಮನಿಸಬಹುದು. ಅದೇನೆಂದರೆ ಇಲ್ಲಿ ಭಾಷೆಯ ಉಳಿವು ಎಂಬುದು ಜನರ ಮಾನಸಿಕ ಸ್ಥಿತಿಯನ್ನವಲಂಬಿಸಿದೆ. ಭಾಷೆಯ ಉಳಿವು ಬೆಳೆವು ಕೇವಲ ವಿದ್ಯಾವಂತ ಶಿಕ್ಷಣ ಪಡೆದ ವರ್ಗಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ಇಡಿಯಾಗಿ ನಾಡಿನ ಸಮಸ್ತ ಜನರನ್ನು ಅವಲಂಬಿಸಿದೆ ಎಂಬುದು. ಆದರೆ ಕೆಲವು ಭಾಷಣಗಳಲ್ಲಿ ಭಾಷೆಯ ಉಳಿವು ಎಂಬುದು ಅಥವಾ ಅಭಿವೃದ್ಧಿ ಎಂಬುದು ಸುಶಿಕ್ಷಿತ/ವಿದ್ಯಾವಂತ

ವರ್ಗದವರ ಕೈಯಲ್ಲಿದೆ ಎನ್ನುವ ಅಂಶಗಳು ಕಾಣಿಸುತ್ತವೆ. ಅಲ್ಲದೆ ಭಾಷಾಭಿವೃದ್ಧಿಯಾಗಬೇಕು ಎಂದರೆ ನಾಡಿನ ಎಲ್ಲಾ ಜನರು ಅಕ್ಷರ ಜ್ಞಾನವನ್ನು ಪಡೆಯಬೇಕು. ಇದರಿಂದ ಹೊಸ ಹೊಸ ಜ್ಞಾನ ವಿಷಯಗಳನ್ನು ತಿಳಿದುಕೊಳ್ಳುವುದರ ಮೂಲಕ ತಮಗೆ ಎದುರಾಗುವ ಸಮಸ್ಯೆಗಳನ್ನು ಸಮರ್ಥವಾಗಿ ಎದುರಿಸಬಹುದು. 'ಭಾರತದಲ್ಲಾಗಲಿ, ಕರ್ನಾಟಕದಲ್ಲಾಗಲಿ ಪಾರಂಪರಿಕ ಮೌಢ್ಯವು ಬೇರು ಬಿಟ್ಟಿದೆ. ಈ ಪಾಶ್ಚಾತ್ಯ ನಾಗರೀಕತೆಯನ್ನು ಗಮನಿಸಿದಾಗ ಅವರ ಎಲ್ಲಾ ರೀತಿಯ ಸಾಧನೆ ಸಿದ್ಧಿಗಳಿಗೆ ವಿಜ್ಞಾನವೇ ಮೂಲ. ಅವರು ಪ್ರಕೃತಿಯನ್ನು ತಮ್ಮ ಪ್ರಯೋಗಾಲಯವನ್ನಾಗಿ ಮಾಡಿಕೊಂಡು ನಿಸರ್ಗ ವ್ಯಾಪಾರದ ಒಳಗುಟ್ಟುಗಳನ್ನೆಲ್ಲಾ ಕಸಿದುಕೊಂಡವರು. ಆ ಮೂಲಕ ತಾವೇ ಒಡೆಯರು ಎಂದು ಮೆರೆದವರು. ಈ ವಿಜ್ಞಾನ ವಿಷಯದಲ್ಲಿನ ಅಜ್ಞಾನವೇ ಭಾರತವು ಹಿಂದುಳಿಯಲು ಕಾರಣ. ವಿಜ್ಞಾನವು ಮೌಢ್ಯಕ್ಕೆ ಮೃತ್ಯುವಿದ್ದಂತೆ[೪೩] ಎನ್ನುವುದನ್ನು ಗಮನಿಸಿದಾಗ ವೈಜ್ಞಾನಿಕವಾಗಿ ಮುಂದುವರೆ ಯುವುದರಿಂದ ನಮ್ಮ ಭಾಷೆಯನ್ನು ಬೆಳೆಸಬಹುದು.

ವೈಚಾರಿಕ ಪ್ರಜ್ಞೆ ಮೂಡುವುದರಿಂದ ಸಮೂಹವು ತನಗೆದುರಾಗುವ ಸಮಸ್ಯೆಗಳನ್ನು, ಸವಾಲುಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತದೆ. ಆದ್ದರಿಂದ ಅಕ್ಷರ ಜ್ಞಾನವು ತುಂಬಾ ಅವಶ್ಯಕವಾಗಿದೆ. ಕನ್ನಡ ಭಾಷೆಯು ಯಾಕೆ ಈ ಸ್ಥಿತಿಗೆ ಬಂದು ನಿಂತಿದೆ ಎಂದರೆ ಮೊದಲಿಗೆ ನಾವು ತಿಳಿದಂತೆ ಆ ಭಾಷಿಕರಲ್ಲಿಯೇ ಅದರ ಬಗ್ಗೆ ಅಸಡ್ಡೆ ಮನೋಭಾವ ಮತ್ತು ಪಾಶ್ಚಾತ್ಯರ ಪ್ರಭಾವ. ಇಂಗ್ಲೀಷ ಶಿಕ್ಷಣ ಕ್ರಮದಿಂದ ಕನ್ನಡದಲ್ಲಿ ಏನಿದೆ? ಕನ್ನಡ ಕಲಿಯುವುದರಿಂದ ನಮಗೇನು ಪ್ರಯೋಜನ? ಈ ರೀತಿಯ ಗ್ರಾಹಕ ಮನೋಭಾವ ಹೆಚ್ಚಾಗಿ ಕಂಡುಬರುತ್ತಿರುವುದರಿಂದ ಇಂಗ್ಲೀಷ್‌ನ ಜೊತೆಯಲ್ಲಿಟ್ಟು ಅದಕ್ಕೆ ಸರಿಸಮಾನವಾಗಿ 'ಕನ್ನಡ ಭಾಷೆ ನೋಡುವ ಪ್ರಯತ್ನ ಅಷ್ಟೇ ಹೊರತಾಗಲಿ. ಯಾಕೆ ಕನ್ನಡವು ಇಂಗ್ಲೀಷ್‌ನ ಸ್ಥಾನಕ್ಕೆ ಹೋಗಲು ಸಾಧ್ಯವಾಗುತ್ತಿಲ್ಲ. ಕನ್ನಡದ ಕೊರತೆಗಳೇನು ಎಂದು ಯೋಚಿಸುತ್ತಿಲ್ಲ. ಆದ್ದರಿಂದ ಕವಿಚರಿತೆಕಾರರಾದ ಆರ್. ನರಸಿಂಹಚಾರ್ಯರು ಹೇಳುವಂತೆ 'ಕನ್ನಡ ಭಾಷೆಯು ಅಭಿವೃದ್ಧಿಯತ್ತ ಸಾಗಬೇಕೆಂದರೆ ಪ್ರಸ್ತುತ ಕಾಲಕ್ಕೆ ಅನುಗುಣವಾಗಿ ಕನ್ನಡಿಗರೆಲ್ಲರೂ ಈ ಅಸಡ್ಡೆಯನ್ನು ತೊಲಗಿಸಿ ಭಾಷಾ ಸೇವೆಯಲ್ಲಿ ನಿರತರಾಗಬೇಕು ಎಂದು ಸಲಹೆಯನ್ನು ನೀಡುತ್ತಾರೆ.'[೪೪] ಹಾಗಾದರೆ ಭಾಷಾ ಸೇವೆ ಎಂದರೇನು? ಅದನ್ನು ಹೇಗೆ ಮಾಡಬೇಕು ಎನ್ನುವ ಪ್ರಶ್ನೆಗಳು ಉಂಟಾಗುತ್ತವೆ. ಅದಕ್ಕು ಅವರ ಮಾತುಗಳಲ್ಲಿ ಉತ್ತರಗಳನ್ನು ಕಂಡುಕೊಳ್ಳಬಹುದು. 'ಪಂಡಿತರನ್ನು ಗೌರವಿಸಬೇಕು. ಕನ್ನಡ ನುಡಿಗಾಗಿ ಶ್ರಮಿಸುವವರನ್ನು ಮರ್ಯಾದೆ ಮಾಡಬೇಕು. ಗ್ರಂಥಸ್ಥ ಭಾಷೆಗೆ ಏಕರೂಪತೆಯನ್ನುಂಟು ಮಾಡಬೇಕು. ಜ್ಞಾನ ವೃದ್ಧಿಕರವಾಗಿ ಪತ್ರಿಕೆಗಳನ್ನು ಹೊರಡಿಸಬೇಕು.'[೪೫]

ಅವರು ನೀಡಿದ ಈ ಸಲಹೆಯಲ್ಲಿ ಗ್ರಂಥಸ್ಥ ಭಾಷೆಗೆ ಏಕರೂಪತೆಯನ್ನುಂಟು ಮಾಡಬೇಕು ಎನ್ನುವ ಅಂಶ ಇದೆ. ಇದು ಕರ್ನಾಟಕದಾದ್ಯಂತ ಒಂದೇ ಕನ್ನಡ ಇದೆ ಎಂದು ಹೇಳಿದಂತಾಗುತ್ತದೆ. ಆದರೆ ಅದರಲ್ಲಿಯೇ ಹಲವಾರು ಪ್ರಭೇದಗಳಿರುವುದು ಅದರ ಒಳಹೊಕ್ಕು ನೋಡಿದಾಗಲೇ ತಿಳಿಯುತ್ತದೆ. ಪ್ರಾದೇಶಿಕ ಭಿನ್ನತೆಗಳಿಗನುಗುಣವಾಗಿ ಅಲ್ಲಿನ ಭಾಷೆಗಳು ಕೂಡಾ ಭಿನ್ನವಾಗಿರುತ್ತವೆ. ಅವುಗಳಲ್ಲಿಯೇ ಗ್ರಂಥಗಳು ರಚನೆಯಾಗುವುದರಿಂದ ಅವು ಕೇವಲ ಆ ಭಾಷೆಗೆ ಮಾತ್ರ ಸೀಮಿತವಾಗಿರುತ್ತದೆ. ಮತ್ತೊಂದು

ಪ್ರದೇಶದ ಜನ ಅದನ್ನು ಅರ್ಥಮಾಡಿಕೊಳ್ಳಲು ಹೆಣಗಾಡಬೇಕಾಗುತ್ತದೆ. ಆದ್ದರಿಂದ ಇಡಿಯಾಗಿ ಕನ್ನಡ ಗ್ರಂಥಗಳನ್ನು ರಚಿಸಬೇಕಾದರೆ ಎಲ್ಲರೂ ಒಪ್ಪುವಂತಹ ಎಲ್ಲರೂ ಅರ್ಥೈಯಿಸಿಕೊಳ್ಳುವಂತಹ ಏಕರೂಪವಾದ ಗ್ರಂಥಸ್ಥ ಭಾಷೆಯನ್ನು ಸಿದ್ಧಪಡಿಸಬೇಕು. ಇದರಿಂದ ಭಾಷೆಯು ಸರಿಯಾಗಿ ಅರ್ಥವಾಗಿ ಅದರ ಬೆಳವಣಿಗೆಗೆ, ಅಭಿವೃದ್ಧಿಗೆ ಸಹಾಯವಾಗುತ್ತದೆ. ಇನ್ನೊಂದು ಅಂಶ, ಪತ್ರಿಕೆಗಳನ್ನು ಹೊರಡಿಸುವುದರ ಮೂಲಕ ಪತ್ರಿಕೆಗಳಲ್ಲಿ ಭಾಷೆಯನ್ನು ಸಮರ್ಥವಾಗಿ ಬಳಸಬಹುದು. ಇಂತಹ ಪತ್ರಿಕೆಗಳು ನಾಡಿನಾದ್ಯಾಂತ ಪ್ರಚಾರಗೊಳ್ಳುತ್ತವೆ. ಇದರಿಂದ ಭಾಷೆಯನ್ನು ಪ್ರಚಾರ ಮಾಡಿದಂತಾಗುತ್ತದೆ.

ಆದ್ದರಿಂದ ಭಾಷಾಭಿವೃದ್ಧಿಯಲ್ಲಿ ಪತ್ರಿಕೆಗಳ ಪಾತ್ರವು ಮಹತ್ವದ್ದಾಗಿದೆ. ಇದನ್ನು ಒಂದು ಮಗ್ಗಲಿನಿಂದ ನೋಡಿದರೆ ಒಪ್ಪಿಕೊಳ್ಳಬಹುದು. ಆದರೆ ಇನ್ನೊಂದು ಮಗ್ಗಲಿನಿಂದ ನೋಡಿದರೆ ಈ ಗ್ರಂಥಸ್ಥ ಭಾಷೆ ಮತ್ತು ಪತ್ರಿಕೆಗಳು ಅಕ್ಷರಜ್ಞಾನವುಳ್ಳವರಿಗೆ ಮಾತ್ರ ಸೀಮಿತವಾಗುತ್ತವೆ. ಏಕೆಂದರೆ ನಾಡಿನಾದ್ಯಂತ ದೇಶದಾದ್ಯಂತ ಅಕ್ಷರ ಜ್ಞಾನವುಳ್ಳವರೇ ಇದ್ದಾರೆಂದು ಹೇಳಲಿಕ್ಕಾಗದು. ಆದ್ದರಿಂದ ಇಂತಹ ಪ್ರಯೋಜನಗಳು ಕೇವಲ ಅಕ್ಷರ ಜ್ಞಾನವುಳ್ಳ ವರ್ಗ ಮಾತ್ರ ಪಡೆಯಲು ಸಾದ್ಯ. ಅವರು ಮಾತ್ರ ಇದರಲ್ಲಿ ತೊಡಗಿಸಿಕೊಳ್ಳಲು ಸಾಧ್ಯ. ಭಾಷೆಯ ಬಹುಪಾಲು ಜೀವಂತವಾಗಿರುವುದು ಜನಸಾಮಾನ್ಯರ ನಾಲಿಗೆಯ ಮೇಲೆ ಅವರ ಸ್ಮೃತಿಯಲ್ಲಿ. ಈ ಜನರಿಗೆ ಅಕ್ಷರ ಜ್ಞಾನ ಇಲ್ಲದೇ ಇರಬಹುದು. ಆದರೆ ಭಾಷಾಜ್ಞಾನ ಇಲ್ಲ ಎಂದು ಹೇಳಲಾಗುವುದಿಲ್ಲ. ಆದ್ದರಿಂದ ಭಾಷಾಭಿ ವೃದ್ಧಿಯನ್ನು ನಾಡಿನ ಸಮಸ್ಥ ಜನರನ್ನು ಗಮನದಲ್ಲಿರಿಸಿಕೊಂಡು ಮಾಡಬೇಕಾಗಿರುವುದು ಅವಶ್ಯವಾಗಿದೆ. ನಾಡಿನಾದ್ಯಂತ ಭಾಷೆಯಲ್ಲಿ ಏಕರೂಪತೆಯನ್ನು ತರುವಲ್ಲಿ ಮತ್ತೊಂದು ಪ್ರಶ್ನೆಯನ್ನು ಗಮನಿಸಬಹುದು. 'ಮಾತನಾಡುವ ಭಾಷೆಯ ಯಾವ ಸ್ವರೂಪವನ್ನು ಅಥವಾ ಪಂಗಡದವರ ಅಥವಾ ಜಿಲ್ಲೆಯವರು ಮಾತನಾಡುವ ಭಾಷೆಯನ್ನು ನಾವು ಅಂಗೀಕರಿಸತಕ್ಕದ್ದು, ಯಾವುದಾದರೂ ಒಂದು ವರ್ಗದವರ ಮಾತನಾಡುವ ಭಾಷೆಗೆ ಉಳಿದ ವರ್ಗದ ಜನರು ಏತಕ್ಕೆ ಒಡಂಬಡಬೇಕು. ಈ ನೂತನ ಕ್ರಮವನ್ನು ಪ್ರಚಾರದಲ್ಲಿ ತರುವುದು ನ್ಯಾಯ ಸಮ್ಮತವೆಂದು ಹೇಗೆ ಹೇಳಬಹುದು. ಇದು ಕೇವಲ ಬಲತ್ಕಾರವಾಗಲಾರದೆ?'[೬೬] ಈ ಪ್ರಶ್ನೆಯು ತುಂಬಾ ಅರ್ಥವತ್ತಾಗಿದೆ ಎನಿಸುತ್ತದೆ. ಭಾಷಾಭಿವೃದ್ಧಿಗಾಗಿ ಭಾಷೆಯಲ್ಲಿ ಏಕರೂಪತೆಯನ್ನು ತರುವಾಗ ಈ ಎಲ್ಲಾ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಅವಶ್ಯಕವಾಗಿದೆ. ಭಾಷೆ ಎನ್ನುವುದು ಯಾವುದೇ ಅಡ್ಡಿ ಆತಂಕಗಳಿಲ್ಲದೇ ಬಳಸಲು ಯಾವುದೇ ನಿರ್ಬಂಧಗಳಿಲ್ಲದೆ ಸರಾಗವಾಗಿ ಹರಿದಾಡುವಂತದ್ದು. ಇದನ್ನು ಬಳಸುವಂತವರ ಇಚ್ಚೆಗೆ ವಿರುದ್ಧವಾಗಿ ರೂಪಿಸುವುದು ರೂಢಿಗತಗೊಳಿಸುವುದು ಮತ್ತೊಂದು ಪ್ರದೇಶ ವೈರುದ್ಯವನ್ನುಂಟು ಮಾಡಿದಂತಾಗುತ್ತದೆ. ಒಂದು ಪ್ರದೇಶದ ಜನ ಒಂದು ವರ್ಗದ ಜನ ತಮ್ಮ ಅನುಕೂಲತೆಗಾಗಿ ರಚಿಸಿಕೊಂಡಂತಹ ಭಾಷೆಯನ್ನು ಮತ್ತೊಂದು ಪ್ರದೇಶದವರು ಮತ್ತೊಂದು ವರ್ಗದವರು ತಮ್ಮ ಇಚ್ಚೆಗೆ ವಿರುದ್ದವಾಗಿ ಯಾಕೆ ಒಪ್ಪಿಕೊಳ್ಳಬೇಕು? ಬಹುಶಃ ಇಂತಹ ಸಂದಿಗ್ದ ಪರಿಸ್ಥಿತಿಯಲ್ಲಿಯೇ ಏನೋ ಭಾಷೆಗಳ ಸಮಸ್ಯೆ ಉಂಟಾಗುವುದು. ಭಾಷೆಗಳ ಹೋರಾಟ ಉಂಟಾಗುವುದು.

ಕನ್ನಡ ಭಾಷೆಯ ಏಳಿಗೆಗಾಗಿ ವೈಜ್ಞಾನಿಕವಾಗಿ ಯೋಚಿಸಿದವರಲ್ಲಿ ಶ್ರೀ ಶಿವಶಂಕರಶಾಸ್ತ್ರಿಗಳು ಒಬ್ಬರಾಗಿದ್ದಾರೆ. ಇವರು ಭಾಷಾಭಿವೃದ್ಧಿಗೆ ಸದುದ್ದೇಶದ ೫ ಅಂಶಗಳನ್ನು ಮುಂದಿಟ್ಟಿದ್ದಾರೆ. ಅವುಗಳನ್ನು

ಹೀಗೆ ಪಟ್ಟಿ ಮಾಡಬಹುದು.

೧. ಕನ್ನಡದಲ್ಲಿ ವ್ಯವಹಾರ ಹೆಚ್ಚಿದಂತೆ ಕೊರತೆಯಾಗಿ ತೋರುವ ಪಾರಿಭಾಷಿಕ ಪದಗಳ ರಚನೆಯಾಗಬೇಕು.

೨. ಪ್ರಾದೇಶಿಕ ಭಾಷಾ ಪ್ರಭೇದಗಳನ್ನು ನಿವಾರಿಸಿ ಭಾಷೆಯಲ್ಲಿ ಐಕ್ಯವನ್ನುಂಟು ಮಾಡಬೇಕು.

೩. ಹೊಸಗನ್ನಡಕ್ಕೆ ಸರಿಯಾದ ಒಂದು ವ್ಯಾಕರಣ ಹುಟ್ಟಬೇಕು

೪. ಕನ್ನಡ ನಾಡುಗಳಲ್ಲೆಲ್ಲಾ ಸಮಾನವಾದ ಪಠ್ಯಪುಸ್ತಕಗಳಾಗಬೇಕು

೫. ಕನ್ನಡತನದ ಪ್ರಚಾರವಾಗಬೇಕು[೪೭]

ಇಲ್ಲಿ ಮೂರನೆಯ ಅಂಶವಾದ ಹೊಸಗನ್ನಡಕ್ಕೆ ಸರಿಯಾದ ಒಂದು ವ್ಯಾಕರಣ ಬೇಕು ಎನ್ನುವುದು ಹೌದು. ಯಾವುದೇ ಭಾಷೆಯು ವ್ಯಾಕರಣಬದ್ಧವಾದ ಅಂಶಗಳಿಂದ ಕೂಡಿರುತ್ತದೆ. ಅದುವರೆಗಿನ ಭಾಷೆಯಲ್ಲಿ ಹಿಂದಿನ ಪದ್ಧತಿಯನ್ನೇ ಅನುಸರಿಸಿಕೊಂಡು ಬರಲಾಗಿತ್ತು. ಕನ್ನಡವು ಕಾಲಕಾಲಕ್ಕೆ ತಕ್ಕಂತೆ ಹೊಸ ಹುಟ್ಟನ್ನು ಪಡೆಯುತ್ತಾ ಹೋಗುತ್ತದೆ. ಬದಲಾಗುವುದೆ ಜೀವಂತಿಕೆಯ ಒಂದು ಲಕ್ಷಣ. ಈ ಸಂದರ್ಭದಲ್ಲಿ ಬದಲಾಗುತ್ತಿರುವ ಕನ್ನಡಕ್ಕೆ ತಕ್ಕಂತೆ ಒಂದು ಹೊಸದಾದ ವ್ಯಾಕರಣದ ಅವಶ್ಯವಿದೆ ಎನ್ನುವುದು ತಿಳಿಯುತ್ತದೆ.

ಭಾಷಾಭಿವೃದ್ಧಿಗೆ ಸ್ಥಾನಿಕ ಸಂಸ್ಥಾನಗಳು ತಮ್ಮ ವ್ಯವಹಾರದಲ್ಲಿ ಕನ್ನಡವನ್ನೆ ಉಪಯೋಗಿ ಸಬೇಕು ಎಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.[೪೮] 'ಆಯಾ ಪ್ರದೇಶದ ಸಾಮಾನ್ಯ ವ್ಯವಹಾರಕ್ಕೆ ಭಾವ ಹಾಗೂ ಬುದ್ಧಿ ಪುಷ್ಟಿಯ ಸಾಧನೆಗೂ ವಿಶೇಷವಾದ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ವಿಕಾಸಕ್ಕೂ ಬೇಕಾದುದು. ಆಯಾ ದೇಶ ಭಾಷಾ ವಿಷಯದಲ್ಲಿ ಆಯಾ ಪ್ರದೇಶಗಳು ಎಷ್ಟು ಶ್ರಮಿಸಿದರೂ ಸಾಲದಾಗಿದೆ, ಎಷ್ಟು ಪ್ರೋತ್ಸಾಹ ಕೊಟ್ಟರೂ ಅತಿರೇಕ ಎನಿಸಿಕೊಳ್ಳಲಾಗದು.'[೪೯] ಹೀಗೆ ಭಾಷಾಭಿವೃದ್ಧಿಯಲ್ಲಿ ಆ ಪ್ರದೇಶಗಳು ಹೆಚ್ಚು ಶ್ರಮಿಸಬೇಕಾಗಿದೆ. ತಮ್ಮ ಎಲ್ಲಾ ವ್ಯವಹಾರಗಳನ್ನು ತಮ್ಮ ದೇಶೀಯ ಭಾಷೆಯಲ್ಲಿಯೇ ಮಾಡಬೇಕು. ಆಡಳಿತ, ವ್ಯವಹಾರ, ಶಿಕ್ಷಣ, ಸಾಹಿತ್ಯ, ಪತ್ರಿಕೆ ಇತ್ಯಾದಿಗಳೆಲ್ಲದರಲ್ಲಿಯೂ ತಮ್ಮ ತಮ್ಮ ದೇಶೀಯ ಭಾಷೆಗಳನ್ನು ಸಮರ್ಥವಾಗಿ ಬಳಸುವುದು ಆ ಮೂಲಕ ಬೆಳೆಸುವುದು ಆ ನಾಡಿನ ಎಲ್ಲರ ಕರ್ತವ್ಯವಾಗಿದೆ. ಹಾಗೆಯೇ ಭಾಷಾಭಿವೃದ್ಧಿಗೆ ಪ್ರತಿಯೊಂದು ಊರಿನಲ್ಲಿ ಒಂದೊಂದು 'ಕನ್ನಡ ಸಂಘಗಳನ್ನು ತೆರೆಯಬೇಕು. ಜನರಿಗೆ ಕನ್ನಡದ ಬಗ್ಗೆ ತಿಳಿಸಿಕೊಡಬೇಕು. ಕನ್ನಡಕ್ಕಾಗಿ ಎಲ್ಲಾ ರೀತಿಯ ಚಟುವಟಿಕೆಗಳು ಈ ಸಂಘದ ಮೂಲಕ ನಡೆಯಬೇಕು. ನಾಡಿನ ಸಮಸ್ತ ಜನರು ತಮ್ಮ ತಮ್ಮ ಮತದ ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿಯೇ ಓದುವಂತವರಾಗಬೇಕು' ಎನ್ನುವುದು ಕೆಲವರ ವಾದ.

'ಕನ್ನಡವು ಯಾವುದೇ ಒಂದು ಧರ್ಮದ ಭಾಷೆಯಲ್ಲ. ಅದು ಯಾವುದೇ ಧರ್ಮದವರಿಂದ ದೂರವಿರಬೇಕಿಲ್ಲ. ಯಾವ ಧರ್ಮವಾದರೂ ಅದನ್ನು ದೂರವಿಡಬೇಕಿಲ್ಲ. ಕನ್ನಡ ಜಾತ್ಯಾತೀತ ಭಾಷೆ' ಎಂದು ಪ್ರೊ. ಬರಗೂರು ರಾಮಚಂದ್ರಪ್ಪನವರ ಮಾತನ್ನು ಇಲ್ಲಿ ನೆನೆಯಬಹುದಾಗಿದೆ.[೫೦] ಇಷ್ಟು ಮಾತ್ರ ಅಲ್ಲದೆ ಕನ್ನಡವು ಅಭಿವೃದ್ಧಿಯಾಗಬೇಕಾದರೆ ಕನ್ನಡಕ್ಕೆ ಕನ್ನಡದ್ದೇ ಆದ ಒಂದು ವಿಶ್ವವಿದ್ಯಾಲಯದ

ಹೀಗೆ ಪಟ್ಟಿ ಮಾಡಬಹುದು.

೧. ಕನ್ನಡದಲ್ಲಿ ವ್ಯವಹಾರ ಹೆಚ್ಚಿದಂತೆ ಕೊರತೆಯಾಗಿ ತೋರುವ ಪಾರಿಭಾಷಿಕ ಪದಗಳ ರಚನೆಯಾಗಬೇಕು.

೨. ಪ್ರಾದೇಶಿಕ ಭಾಷಾ ಪ್ರಭೇದಗಳನ್ನು ನಿವಾರಿಸಿ ಭಾಷೆಯಲ್ಲಿ ಐಕ್ಯವನ್ನುಂಟು ಮಾಡಬೇಕು.

೩. ಹೊಸಗನ್ನಡಕ್ಕೆ ಸರಿಯಾದ ಒಂದು ವ್ಯಾಕರಣ ಹುಟ್ಟಬೇಕು

೪. ಕನ್ನಡ ನಾಡುಗಳಲ್ಲೆಲ್ಲಾ ಸಮಾನವಾದ ಪಠ್ಯಪುಸ್ತಕಗಳಾಗಬೇಕು

೫. ಕನ್ನಡತನದ ಪ್ರಚಾರವಾಗಬೇಕು[೪೭]

ಇಲ್ಲಿ ಮೂರನೆಯ ಅಂಶವಾದ ಹೊಸಗನ್ನಡಕ್ಕೆ ಸರಿಯಾದ ಒಂದು ವ್ಯಾಕರಣ ಬೇಕು ಎನ್ನುವುದು ಹೌದು. ಯಾವುದೇ ಭಾಷೆಯು ವ್ಯಾಕರಣಬದ್ಧವಾದ ಅಂಶಗಳಿಂದ ಕೂಡಿರುತ್ತದೆ. ಅದುವರೆಗಿನ ಭಾಷೆಯಲ್ಲಿ ಹಿಂದಿನ ಪದ್ಧತಿಯನ್ನೇ ಅನುಸರಿಸಿಕೊಂಡು ಬರಲಾಗಿತ್ತು. ಕನ್ನಡವು ಕಾಲಕಾಲಕ್ಕೆ ತಕ್ಕಂತೆ ಹೊಸ ಹುಟ್ಟನ್ನು ಪಡೆಯುತ್ತಾ ಹೋಗುತ್ತದೆ. ಬದಲಾಗುವುದೆ ಜೀವಂತಿಕೆಯ ಒಂದು ಲಕ್ಷಣ. ಈ ಸಂದರ್ಭದಲ್ಲಿ ಬದಲಾಗುತ್ತಿರುವ ಕನ್ನಡಕ್ಕೆ ತಕ್ಕಂತೆ ಒಂದು ಹೊಸದಾದ ವ್ಯಾಕರಣದ ಅವಶ್ಯವಿದೆ ಎನ್ನುವುದು ತಿಳಿಯುತ್ತದೆ.

ಭಾಷಾಭಿವೃದ್ಧಿಗೆ ಸ್ಥಾನಿಕ ಸಂಸ್ಥಾನಗಳು ತಮ್ಮ ವ್ಯವಹಾರದಲ್ಲಿ ಕನ್ನಡವನ್ನೆ ಉಪಯೋಗಿ ಸಬೇಕು ಎಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.[೪೮] 'ಆಯಾ ಪ್ರದೇಶದ ಸಾಮಾನ್ಯ ವ್ಯವಹಾರಕ್ಕೆ ಭಾವ ಹಾಗೂ ಬುದ್ಧಿ ಪುಷ್ಟಿಯ ಸಾಧನೆಗೂ ವಿಶೇಷವಾದ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ವಿಕಾಸಕ್ಕೂ ಬೇಕಾದುದು. ಆಯಾ ದೇಶ ಭಾಷಾ ವಿಷಯದಲ್ಲಿ ಆಯಾ ಪ್ರದೇಶಗಳು ಎಷ್ಟು ಶ್ರಮಿಸಿದರೂ ಸಾಲದಾಗಿದೆ, ಎಷ್ಟು ಪ್ರೋತ್ಸಾಹ ಕೊಟ್ಟರೂ ಅತಿರೇಕ ಎನಿಸಿಕೊಳ್ಳಲಾಗದು.'[೪೯] ಹೀಗೆ ಭಾಷಾಭಿವೃದ್ಧಿಯಲ್ಲಿ ಆ ಪ್ರದೇಶಗಳು ಹೆಚ್ಚು ಶ್ರಮಿಸಬೇಕಾಗಿದೆ. ತಮ್ಮ ಎಲ್ಲಾ ವ್ಯವಹಾರಗಳನ್ನು ತಮ್ಮ ದೇಶೀಯ ಭಾಷೆಯಲ್ಲಿಯೇ ಮಾಡಬೇಕು. ಆಡಳಿತ, ವ್ಯವಹಾರ, ಶಿಕ್ಷಣ, ಸಾಹಿತ್ಯ, ಪತ್ರಿಕೆ ಇತ್ಯಾದಿಗಳೆಲ್ಲದರಲ್ಲಿಯೂ ತಮ್ಮ ತಮ್ಮ ದೇಶೀಯ ಭಾಷೆಗಳನ್ನು ಸಮರ್ಥವಾಗಿ ಬಳಸುವುದು ಆ ಮೂಲಕ ಬೆಳೆಸುವುದು ಆ ನಾಡಿನ ಎಲ್ಲರ ಕರ್ತವ್ಯವಾಗಿದೆ. ಹಾಗೆಯೇ ಭಾಷಾಭಿವೃದ್ಧಿಗೆ ಪ್ರತಿಯೊಂದು ಊರಿನಲ್ಲಿ ಒಂದೊಂದು 'ಕನ್ನಡ ಸಂಘಗಳನ್ನು ತೆರೆಯಬೇಕು. ಜನರಿಗೆ ಕನ್ನಡದ ಬಗ್ಗೆ ತಿಳಿಸಿಕೊಡಬೇಕು. ಕನ್ನಡಕ್ಕಾಗಿ ಎಲ್ಲಾ ರೀತಿಯ ಚಟುವಟಿಕೆಗಳು ಈ ಸಂಘದ ಮೂಲಕ ನಡೆಯಬೇಕು. ನಾಡಿನ ಸಮಸ್ತ ಜನರು ತಮ್ಮ ತಮ್ಮ ಮತದ ಗ್ರಂಥಗಳನ್ನು ಕನ್ನಡ ಭಾಷೆಯಲ್ಲಿಯೇ ಓದುವಂತವರಾಗಬೇಕು' ಎನ್ನುವುದು ಕೆಲವರ ವಾದ.

'ಕನ್ನಡವು ಯಾವುದೇ ಒಂದು ಧರ್ಮದ ಭಾಷೆಯಲ್ಲ. ಅದು ಯಾವುದೇ ಧರ್ಮದವರಿಂದ ದೂರವಿರಬೇಕಿಲ್ಲ. ಯಾವ ಧರ್ಮವಾದರೂ ಅದನ್ನು ದೂರವಿಡಬೇಕಿಲ್ಲ. ಕನ್ನಡ ಜಾತ್ಯಾತೀತ ಭಾಷೆ' ಎಂದು ಪ್ರೊ. ಬರಗೂರು ರಾಮಚಂದ್ರಪ್ಪನವರ ಮಾತನ್ನು ಇಲ್ಲಿ ನೆನೆಯಬಹುದಾಗಿದೆ.[೫೦] ಇಷ್ಟು ಮಾತ್ರ ಅಲ್ಲದೆ ಕನ್ನಡವು ಅಭಿವೃದ್ಧಿಯಾಗಬೇಕಾದರೆ ಕನ್ನಡಕ್ಕೆ ಕನ್ನಡದ್ದೇ ಆದ ಒಂದು ವಿಶ್ವವಿದ್ಯಾಲಯದ

ಅಗತ್ಯವಿದೆ. ಕನ್ನಡದ ಭಾಷೆಗೆಂದೇ ಪ್ರತ್ಯೇಕವಾದ ಒಂದು ವಿಶ್ವವಿದ್ಯಾಲಯ ಬೇಕು. ಅಲ್ಲಿ ಕನ್ನಡಕ್ಕಾಗಿ ಸದಾ ಎಲ್ಲಾ ರೀತಿಯ ಕಾರ್ಯಗಳು ನಡೆಯುತ್ತಿರಬೇಕು ಎನ್ನುವ ಆಶಾಭಾವನೆಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದು.[೫೧]

ಈ ರೀತಿಯಾಗಿ ಭಾಷೆಯ ಸ್ಥಿತಿ ಈಗ ಯಾವ ಮಟ್ಟದಲ್ಲಿದೆ, ಅದನ್ನು ಅಭಿವೃದ್ಧಿಗೊಳಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು ಯಾವ ಅಂಶಗಳನ್ನು ಅಳವಡಿಸಿಕೊಳ್ಳಬೇಕು ಎಂಬುದನ್ನು ಚರ್ಚಿಸಿದ್ದಾರೆ.

ಅಡಿಟಿಪ್ಪಣಿಗಳು

೧. ಮು.ಸಂ. ೩೩, ಸಂ.೧

೨. ಮು.ಸಂ. ೩೪, ಸಂ.೧

೩. ಮು.ಸಂ.೨೫೪, ಸಂ.೨

೪. ಮು.ಸಂ.೪೯೩, ಸಂ.೨

೫. ಮು.ಸಂ.೪೯೬, ಸಂ.೩

೬. ಮು.ಸಂ.೧೦೧, ಸಂ.೨

೭. ಮು.ಸಂ.೧೯೮, ಸಂ.೧

೮. ಮು.ಸಂ.೨೮೭, ಸಂ.೧

೯. ಮು.ಸಂ.೩೫೨, ಸಂ.೧

೧೦. ಮು.ಸಂ.೩೫೩, ಸಂ.೧

೧೧. ಮು.ಸಂ.೭೪, ಸಂ.೨

೧೨. ಮು.ಸಂ.೧೦, ಸಂ.೨

೧೩. ಮು.ಸಂ. ೭೦, ಸಂ.೨

೧೪. ಮು.ಸಂ.೩೯೩, ಸಂ.೧

೧೫. ಮು.ಸಂ.೧೮೬, ಸಂ.೨

೧೬. ಮು.ಸಂ.೩೧೦, ಸಂ.೨

೧೭. ಮು.ಸಂ.೫, ಸಂ.೧

೧೮. ಮು.ಸಂ.೧೮, ಸಂ.೩

೧೯. ಮು.ಸಂ.೨೭೦, ಸಂ.೨

೨೦. ಮು.ಸಂ.೨೯, ಸಂ.೨

೨೧. ಮು.ಸಂ.೨೮, ಸಂ.೨

೨೨. ಮು.ಸಂ.೫೧, ಸಂ.೨

೨೩. ಮು.ಸಂ.೧೮೧, ಸಂ.೨

೨೪. ಮು.ಸಂ.೩೦೬, ಸಂ.೨

೨೫. ಮು.ಸಂ.೩೦೬, ಸಂ.೨

೨೬. ಮು.ಸಂ.೩೫೬, ಸಂ.೩

೨೭. ಪು.ಸಂ.೬೯, ಸಂ.೨

೨೮. ಪು.ಸಂ. ೧೦೭, ಸಂ.೨

೨೯. ಪು.ಸಂ. ೧೧೦,೧೧೧, ಸಂ.೩

೩೦. ಪು.ಸಂ. ೫, ಸಂ.೧

೩೧. ಪು.ಸಂ. ೩೮೪, ಸಂ.೧

೩೨. ಪು.ಸಂ. ೩೦೪, ಸಂ.೧

೩೩. ಪು.ಸಂ. ೩೦೪, ಸಂ.೧

೩೪. ಪು.ಸಂ. ೩೦೩, ಸಂ.೧

೩೫. ಪು.ಸಂ. ೩೮೪, ಸಂ.೨

೩೬. ಪು.ಸಂ. ೬೧, ಸಂ.೩

೩೭. ಪು.ಸಂ. ೧೦೭, ಸಂ. ಕೆ. ಅನಂತರಾಮರಾವ್

೩೮. ಪು.ಸಂ. ೧೧೧, ಸಂ.೩

೩೯. ಪು.ಸಂ. ೮೮, ಸಂ.೧

೪೦. ಪು.ಸಂ. ೧೦೨, ಸಂ.೧

೪೧. ಪು.ಸಂ. ೧೦೬, ಸಂ.೧

೪೨. ಪು.ಸಂ. ೯೮, ಸಂ.೧

೪೩. ಪು.ಸಂ. ೭೮, ಸಂ.೧

೪೪. ಪು.ಸಂ. ೫೨, ಸಂ.೧

೪೫. ಪು.ಸಂ. ೫೨, ಸಂ.೧

೪೬. ಪು.ಸಂ. ೧೮೦, ಸಂ.೧

೪೭. ಪು.ಸಂ. ೧೨೪, ಸಂ.೧

೪೮. ಪು.ಸಂ. ೧೭೦, ಸಂ.೨

೪೯. ಪು.ಸಂ. ೧೧೩, ಸಂ.೩

೫೦. ಪು.ಸಂ. ೧೯೩, ಕನ್ನಡ ಪ್ರಜ್ಞೆ

೫೧. ಪು.ಸಂ. ೧೯೬,೧೯೭, ಸಂ.೧

ಅಧ್ಯಾಯ : ಮೂರು

## ಸಾಹಿತ್ಯವನ್ನು ಕುರಿತ ಚಿಂತನೆ

ಕನ್ನಡ ಸಾಹಿತ್ಯ ಸಮ್ಮೇಳನ ಹೆಸರೇ ಸೂಚಿಸುವಂತೆ ಇದು ಸಾಹಿತ್ಯ ಸಮ್ಮೇಳನವೇ ಆಗಿದೆ. ಈ ಸಾಹಿತ್ಯ ಸಮ್ಮೇಳನಗಳಲ್ಲಿ ಹೆಚ್ಚಾಗಿ ಸಾಹಿತಿಗಳೇ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದಾರೆ. ಈ ನಿಟ್ಟಿನಲ್ಲಿ ಅವರು ಸಾಹಿತ್ಯದ ಬಗ್ಗೆ ಏನು ಹೇಳಿದ್ದಾರೆ, ಆ ಮೂಲಕ ಸಾಹಿತ್ಯವನ್ನು ಹೇಗೆ ಗ್ರಹಿಸಿದ್ದಾರೆ. ಎನ್ನುವುದನ್ನು ತಿಳಿಯುವುದು ಈ ಭಾಗದ ಉದ್ದೇಶವಾಗಿದೆ. ಅಷ್ಟೇ ಅಲ್ಲ ಸಾಹಿತಿಗಳ ಬಗ್ಗೆ, ಸಹೃದಯರ ಬಗ್ಗೆ, ವಿಮರ್ಶಕರ ಬಗ್ಗೆ, ಸಾಹಿತ್ಯದ ಕಾರ್ಯ ವಸ್ತು ಪ್ರಸಾರ ಸಂಶೋಧನೆ, ಜನಪದ ಸಾಹಿತ್ಯ, ಸಾಹಿತ್ಯದ ಅಭಿವೃದ್ಧಿ ಇತ್ಯಾದಿಗಳನ್ನು ತಮ್ಮ ಮಾತುಗಳಲ್ಲಿ ಹೇಗೆ ಅಭಿವ್ಯಕ್ತಿಸಿದ್ದಾರೆ ಎನ್ನುವುದನ್ನು ನೋಡಬಹುದಾಗಿದೆ. ಹಾಗಾದರೆ ಮೊದಲಿಗೆ ಸಾಹಿತ್ಯ ಎಂದರೇನು? ಎನ್ನುವುದಕ್ಕೆ ಭಾಷಣಕಾರರು ನೀಡಿದ ವಿವಿಧ ವ್ಯಾಖ್ಯಾನಗಳನ್ನು ಕ್ರೋಢೀಕರಿಸಬಹುದು. ಸಾಹಿತ್ಯ ಕೇವಲ ಭಾಷೆಯ ಆಧಾರದ ಮೇಲೆ ಕೃತಿಯ ರೂಪದಲ್ಲಿ ರಚನೆಯಾಗಿರುವುದು ಮಾತ್ರವೇ ಅಲ್ಲ.

'ಹಿತವನ್ನು ಮಾಡತಕ್ಕದ್ದೇ ಸಾಹಿತ್ಯವೆಂಬುದು ಅದರ ಸರಿಯಾದ ಅರ್ಥ. ಪ್ರತಿಯೊಂದು ಉದ್ಯೋಗದವರು ಇದನ್ನು ಉಪಯೋಗಿಸುತ್ತಾರೆ. ಸಾಹಿತಿಗಳ್ರಿ ಸಾಹಿತ್ಯ ಕಾವ್ಯ ಪುರುಷನಿಗೆ ರಸವೇ ಆತ್ಮ'[೧] 'ಸಾಹಿತ್ಯವು ಯಾವಾಗಲೂ ಆಹ್ಲಾದವನ್ನುಂಟುಮಾಡಿ ಮನಗೊಳ್ಳುವುದು. ಕೇವಲ ಅರ್ಥಬೋಧೆ ಮಾಡದೇ ಆನಂದವನ್ನಂಟು ಮಾಡುತ್ತಲೇ ಅರ್ಥಬೋಧೆ ಮಾಡದೇ ಆನಂದವನ್ನುಂಟು ಮಾಡುತ್ತಲೇ ಅರ್ಥಬೋಧೆ ಮಾಡಿಬಿಡುವುದು'.[೨]

'ಸಾಹಿತ್ಯವು ನಮ್ಮ ಜೀವನದ ಪ್ರತಿಬಿಂಬ. ಸಾಹಿತ್ಯದ ಝರಿ ಜೀವನದಲ್ಲಿ ಉತ್ಪತ್ತಿಯಾಗುತ್ತದೆ. ಸಾಹಿತ್ಯ ಯಾವುದೇ ನಾಡಿನ ಸಂಸ್ಕೃತಿಯ ಮುಖ್ಯಾಂಗ. ಆಯಾ ನಾಡಿನ ಕೃತಿಗಳು ನಷ್ಟವಾಗಿ ಸಾಹಿತ್ಯವೊಂದು ಉಳಿದಿದ್ದರೆ ಅದರ ಸಂಸ್ಕೃತಿಯಲ್ಲಿ ಉಳಿದಿದೆ ಎಂದು ಹೇಳಬಹುದು'[೩] 'ಸಾಹಿತ್ಯ ಎಂದರೆ ವಿನೋದಕ್ಕಾಗಿ, ವಿಲಾಸಕ್ಕಾಗಿ ನಿಜಪ್ರಪಂಚದಿಂದ ಮಾಡುವ ಫಲಾಯನವಲ್ಲ. ಸುತ್ತಮುತ್ತಲೂ ಇರುವ ಜಗತ್ತಿನೊಡನೆ ವ್ಯಕ್ತಿಗಾದ ಸಂಸ್ಪರ್ಶದಿಂದ ಸಹಜವಾಗಿ ಉಂಟಾದ ಪ್ರಕಾಶದ ಇಂಪು ಸೊಂಪಾದ ವೈಖರಿಯೇ'.[೪]

'ಸಾಹಿತ್ಯದೊಡನೆ ನಮ್ಮ ಕನ್ನಡ ಭಾಷೆಯು ಮಾಡಿಕೊಂಡ ವಿವಾಹದ ಫಲವಾಗಿ ಒಂದು ಪುರಾತನ ಪ್ರಸಿದ್ಧ ಸಾಹಿತ್ಯ ವಂಶಾವಳಿಯು ನಮ್ಮಲ್ಲಿ ಹುಟ್ಟಿತು.[೫]

'ಸಾಹಿತ್ಯವೆಂದರೆ ಸಂಜೀವನಿ ವಿದ್ಯೆ. ಅದು ಎದರಲ್ಲಿದೆ? ಒಂದನ್ನೊಂದು ತಿಂದು ಬದುಕುವುದು ಬದುಕಲ್ಲ 'ಸಾವು' ಒಂದನ್ನೊಂದು ತಿಳಿದು ಬದುಕುವುದು ಬಾಳು ಎಂದು ಸಾಹಿತ್ಯ ಸಾರುತ್ತದೆ.'[೬]

ಹೀಗೆ ಸಾಹಿತ್ಯವನ್ನು ವಿಧ ವಿಧವಾಗಿ ಗ್ರಹಿಸಿದ್ದಾರೆ. ಇವೆಲ್ಲವುಗಳನ್ನು ಗಮನಿಸಿದಾಗ ಸಾಹಿತ್ಯದ ಅರ್ಥ ಒಂದೇ ತೆರನಾಗಿಲ್ಲ. ಅದನ್ನು ನೋಡುವ ದೃಷ್ಟಿಕೋನದ ಮೂಲಕ ಅದು ಗ್ರಹಿಕೆಗೊಳಪಡುತ್ತದೆ ಎಂದು ಹೇಳಬಹುದು.

ಈಗ ಈ ವ್ಯಾಖ್ಯಾನಗಳನ್ನೇ ವಿವರಿಸುವುದಾದರೆ ಹಿತವನ್ನು ಮಾಡತಕ್ಕದ್ದೆ ಸಾಹಿತ್ಯ ಎನ್ನುವುದಾದರೆ

ಸಾಹಿತ್ಯ ಕೇವಲ ಹಿತವನ್ನೊಂದೇ ಉಂಟು ಮಾಡುತ್ತದೆಯೇ? ಸಾಹಿತ್ಯದಲ್ಲಿರುವುದು ಎಲ್ಲರಿಗೂ ಹಿತವನ್ನು ಕೊಡಲಿಕ್ಕೆ ಸಾಧ್ಯವೆ? ಇಲ್ಲಿ ಹಿತ ಎಂದರೆ ಆನಂದ, ಸಂತೋಷ, ಮುದ ಇತ್ಯಾದಿಯಾಗಿ ಇದನ್ನು ಅರ್ಥೈಸುವುದಾದರೆ ಕೇವಲ ಇವುಗಳು ಮಾತ್ರ ಸಾಹಿತ್ಯದಲ್ಲಿರಲು ಸಾಧ್ಯವೇ? ಎನ್ನುವ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಲಾಕ್ಷಣಿಕರು ಕೂಡ ಹೇಳಿದ್ದಾರೆ. ಶಬ್ದಾರ್ಥಗಳಿಂದ ಕೂಡಿದ್ದು ಮನಸ್ಸಿಗೆ ಆನಂದವನ್ನು, ಆಹ್ಲಾದವನ್ನುಂಟು ಮಾಡುವದು ಸಾಹಿತ್ಯ ಎಂದು. ಆದರೆ ಇಷ್ಟು ಮಾತ್ರ ಒಳಗೊಂಡಿರುವುದನ್ನು ಸಾಹಿತ್ಯ ಎಂದು ಪರಿಗಣಿಸಲಾಗುವುದಿಲ್ಲ. ಕೆಲವು ಸಾಹಿತ್ಯ ಕೃತಿಗಳನ್ನು ಗಮನಿಸಬಹುದು. ಪಂಪನ ವಿಕ್ರಮಾರ್ಜುನ ವಿಜಯವನ್ನೇ ಗಮನಿಸಿದರೆ ಅದರಲ್ಲಿರುವುದೆಲ್ಲ ಹಿತವೆ. ಅದು ಕೇವಲ ಹಿತವನ್ನೊಂದೇ ಹೇಳುತ್ತಿದೆಯೆ? ಅಲ್ಲಿ ಕರ್ಣನ ಪಾತ್ರ ಯಾರ ಹಿತವನ್ನು ಹೇಳುತ್ತದೆ? ಹಿತ ಎನ್ನುವುದನ್ನು ಒಳ್ಳೆಯದು ಎಂಬ ಅರ್ಥದಲ್ಲಿ ಗ್ರಹಿಸಿದರೆ ಯಾರಿಗೆ ಮತ್ತು ಯಾವ ರೀತಿಯ ಹಿತವನ್ನು ಮಾಡುತ್ತದೆ ಎನ್ನುವುದು ಅರ್ಥವಾಗುತ್ತದೆ. ಆದ್ದರಿಂದ ಸಾಹಿತ್ಯದಲ್ಲಿರುವುದೆಲ್ಲವು ಹಿತ ಕೇವಲ ಹಿತವನ್ನುಂಟು ಮಾಡುವುದೇ ಸಾಹಿತ್ಯ ಅಲ್ಲ ಎಂದು ಹೇಳಬಹುದು.

ಈಗ ಇನ್ನೊಂದು ವ್ಯಾಖ್ಯಾನವನ್ನು ಗಮನಿಸುವುದಾದರೆ ಸಾಹಿತ್ಯ ಯಾವಾಗಲೂ ಆಹ್ಲಾದವನ್ನುಂಟು ಮಾಡುವುದು ಎಂದರೆನು? ಸಾಹಿತ್ಯವನ್ನು ಓದಿದಾಗ, ಒಂದು ಕೃತಿಯನ್ನು ಓದಿದಾಗ ಅದು ಕೇವಲ ಹೊಸ ಅರ್ಥವನ್ನು ಹೊಸ ಚಿಂತನೆಯನ್ನು ಕಟ್ಟಿಕೊಡುತ್ತದೆ. ಕುವೆಂಪು, ಕಾರಂತರ ಕಾದಂಬರಿಗಳು ಕೇವಲ ಆಹ್ಲಾದವನ್ನುಂಟು ಮಾಡುತ್ತವೆ ಎಂದು ಹೇಳಲಿಕ್ಕಾಗುತ್ತದೆಯೇ? ಈ ರೀತಿಯ ವ್ಯಾಖ್ಯಾನಗಳು ಒಂದು ಕೃತಿಯನ್ನು ಯಾವುದೇ ಒಳನೋಟಗಳಿಂದ ಗ್ರಹಿಸಿದಾಗ ಮಾತ್ರ ಬರುವಂತಹವಾಗಿವೆ ಎಂದು ಹೇಳಬಹುದು. ಇನ್ನು ಸಾಹಿತ್ಯವು ಜೀವನದ ಪ್ರತಿಬಿಂಬ ಎನ್ನುವ ವ್ಯಾಖ್ಯಾನವನ್ನು ಗಮನಿಸುವುದಾದರೆ ಜೀವನದಲ್ಲಿರುವುದೆಲ್ಲವನ್ನು ಸಾಹಿತ್ಯ ಪ್ರತಿಬಿಂಬಿಸುತ್ತದೆಯೇ? ಪ್ರತಿಬಿಂಬ ಎಂದರೆ ಇದ್ದುದ್ದನ್ನು ಇದ್ದ ಹಾಗೇ ಕಾಣಿಸುವುದು. ಜೀವನಕ್ಕೂ, ಸಾಹಿತ್ಯಕ್ಕೂ ನಂಟಿವೆ ಒಪ್ಪಬಹುದು. ಸಾಹಿತ್ಯವು ತನ್ನ ವಸ್ತುವನ್ನು ಜೀವನದಿಂದಲೇ ಆಯ್ದುಕೊಳ್ಳುತ್ತದೆ. ಹಾಗೆಂದು ಜೀವನವನ್ನು ಯಥಾವತ್ತಾಗಿ ಅದು ಪ್ರತಿಬಿಂಬಿಸುತ್ತಿದೆಯೇ? ಯಥಾವತ್ತಾಗಿ ಪ್ರತಿಬಿಂಬಿಸುವುದಾದರೆ ಅದು ಸಾಹಿತ್ಯ ಹೇಗಾಗುತ್ತದೆ? ಅದು ವರದಿಯಾಗುವುದಿಲ್ಲವೇ? ಜೀವನವನ್ನು ಯಥಾವತ್ತಾಗಿ ಸ್ವೀಕರಿಸಿದರೂ ಕವಿಯಾದವನೂ/ಲೇಖಕರು ತಮ್ಮ ಕುಲುಮೆಯಲ್ಲಿ ಅದಕ್ಕೆ ಹೊಸದಾದ ಒಂದು ರೂಪವನ್ನು ಕೊಡುತ್ತಾ ಬಂದಿದ್ದಾರೆ.

ಹಾಗೆಂದ ಮೇಲೆ ಅದು ಜೀವನದ ಪ್ರತಿಬಿಂಬ ಹೇಗಾಗುತ್ತದೆ? ಭಾಷೆಯನ್ನು/ವಸ್ತುವನ್ನು ಯಥಾವತ್ತಾಗಿ ಸ್ವೀಕರಿಸಬಹುದು. ಆದರೆ ಅದು ಹೊಸರೂಪದಿಂದಲೇ ಸಹೃದಯರ /ಓದುಗರ / ಸಮಾಜದಲ್ಲಿ ಕಾಣಲು ಪ್ರಾರಂಭವಾಗುತ್ತದೆ. ಸಾಹಿತ್ಯ ಸಮಕಾಲೀನ ಸಂದರ್ಭಗಳಿಗೆ ಅನುಗುಣವಾಗಿ, ಒತ್ತಡಗಳಿಗೆ ಅನುಗುಣವಾಗಿ ಹಾಗೂ ಸ್ಥಿತ್ಯಂತರಗಳಿಗೆ ಅನುಗುಣವಾಗಿ ರೂಪುಗೊಳ್ಳುವಂತಹದು. ಇದುವೇ ಸಾಹಿತ್ಯದ ಜೀವಂತಿಕೆ. 'ಸಾಹಿತ್ಯವು ಜೀವನದ ಪ್ರತಿಬಿಂಬ ಅಲ್ಲ. ಅದು ಜೀವನದ ಗತಿಬಿಂಬ'[೨] ಎನ್ನುತ್ತಾರೆ ಜಿ.ಎಸ್. ಶಿವರುದ್ರಪ್ಪ ಅವರು. ಸಾಹಿತ್ಯದಲ್ಲಿ ಆಯಾ ಕಾಲದ ಸಂಸ್ಕೃತಿಯ ಕುರುಹುಗಳು ಲೀನವಾಗಿರುತ್ತವೆ ನಿಜ. ಎಂಥ ಸಂಸ್ಕೃತಿ? ಕೇವಲ ಸಾಹಿತಿಯ ಸುತ್ತಲಿನ ಸಂಸ್ಕೃತಿ ಎನ್ನಬಹುದು. ಆದರೆ

ಆತನ ಸಮಕಾಲಕ್ಕೆ ಅಳಿವಿನ ಅಂಚಿನಲ್ಲಿರುವ ಹಲವಾರು ಬುಡಕಟ್ಟಿನ ಸಂಸ್ಕೃತಿಗಳು ಅದರಲ್ಲಿ ಸ್ಥಾನವನ್ನು ಪಡೆದಿರುವುದಿಲ್ಲ. ಕಾರಣ ಅವು ಸಾಹಿತಿಯ ಸಮಾಜದಿಂದ ಬಹು ದೂರವಾಗಿಯೇ ಉಳಿದಿರುತ್ತವೆ. ಅಂತೆಯೇ ಅವು ಆ ಕಾಲದ ಸಾಹಿತ್ಯದಿಂದಲೂ ದೂರವಾಗಿಯೇ ಉಳಿದಿರುತ್ತವೆ ಹಾಗೆಂದ ಮೇಲೆ ಯಾವ ಕಲೆಗಳು ನಾಶವಾದರೂ ಸಾಹಿತ್ಯವೊಂದು ಉಳಿದಿದೆ ಎಂದರೆ ಆ ನಾಡಿನ ಸಂಸ್ಕೃತಿಯನ್ನು ಪುನಃ ಕಟ್ಟಬಹುದು ಇಲ್ಲವೆಂದಲ್ಲ. ಇಲ್ಲಿ ಸಾಹಿತ್ಯದ ಮಹತ್ವವನ್ನು ಅಲ್ಲಗಳೆಯುತ್ತಿಲ್ಲ. ಆದರೆ ಒಂದು ಸಾಹಿತ್ಯದಲ್ಲಿ ಕಟ್ಟಿಕೊಡುವುದು ತನ್ನ ನಾಗರಿಕ ಸಮಾಜದ ಸಂಸ್ಕೃತಿಯನ್ನು. ಹೀಗೆ ಸಾಹಿತ್ಯವೆಂದರೆ ಕೇವಲ ಹಿತವನ್ನುಂಟು ಮಾಡಲು ವಿನೋದಕ್ಕಾಗಿ, ವಿಲಾಸಕ್ಕಾಗಿ ಮಾತ್ರವಲ್ಲ. ಅದು ಹೊಸ ಚಿಂತನೆಗಳನ್ನು ಹೊಸ ಆಲೋಚನೆಗಳನ್ನು ಕಟ್ಟಿಕೊಡುವಂತಾಗಬೇಕು. ಯಾವುದೋ ಭ್ರಮಾತ್ಮಕ ಲೋಕವನ್ನು ಸೃಷ್ಟಿಸಿ ಈ ವಾಸ್ತವ ಪ್ರಪಂಚದಿಂದ ನಿಜಪ್ರಪಂಚದಿಂದ ಮಾಡುವ ಪಲಾಯನವಲ್ಲ. ತನ್ನ ಸುತ್ತಲಿನ ಸಮಾಜದಿಂದ ಕಂಡು ಕೇಳಿ ಪಡೆದ ಅನುಭವಗಳು ಸಾಹಿತಿಯ ಮನೋಭೂಮಿಕೆಯಲ್ಲಿ ಹೊಸ ರೂಪವನ್ನು ಪಡೆಯುತ್ತವೆ. ಸಾಹಿತ್ಯವು ರೋಗಗ್ರಸ್ಥ ಮನಸ್ಸನ್ನು ಸಮಾಜವನ್ನು ಚೈತನ್ಯಪೂರ್ಣವಾಗಿ ಮಾಡುತ್ತದೆ. ಆದರೆ ಈ ಸಾಹಿತ್ಯ ಕೇವಲ ಒಂದು ವರ್ಗದ ಜನಗಳ ಮನಸ್ಸು ಮತ್ತು ಬುದ್ಧಿಯನ್ನು ಮುಟ್ಟಬಹುದು. ಆದರೆ ಸಮಾಜದ ಬಹುತೇಕ ಜನಗಳ ಮನಸ್ಸಿಗೆ ಈ ಸಾಹಿತ್ಯ ಅವಶ್ಯವೂ ಅಲ್ಲ. ಅನಿವಾರ್ಯವೂ ಅಲ್ಲ. ಏಕೆಂದರೆ ಅವರು ತಮ್ಮದೇ ಆದಂತಹ ಸ್ಮೃತಿ ಸಾಹಿತ್ಯದಿಂದ ಚೈತನ್ಯವನ್ನು ಪಡೆಯುತ್ತಿರುತ್ತಾರೆ. ಆದ್ದರಿಂದ ಸಾಹಿತ್ಯವೆಂದರೆ ಅದು ಶಿಷ್ಟ ರೂಪದ್ದಿರಬಹುದು ಅಥವಾ ದೇಶೀ ಶೈಲಿಯ ಜನಪದ ರೂಪದ್ದಿರಬಹುದು. ಒಟ್ಟಾರೆ ಸಮಾಜದಲ್ಲಿ ತಿಳಿದು ಬದುಕುವುದನ್ನು ಸಾಹಿತ್ಯವು ತನ್ಮೂಲಕ ಸಾರುತ್ತದೆ. ಇದನ್ನು ಕೆಲವು ಸಂದರ್ಭಗಳಲ್ಲಿ ಒಪ್ಪಬಹುದು/ಒಪ್ಪದಿರಬಹುದು. ಸಮಾಜವು ಮುಂದುವರೆದಂತೆ ಸಾಹಿತ್ಯವು ಮುಂದುವರೆಯುತ್ತಿರುತ್ತದೆ. ಸಾಮಾಜಿಕ ಸಂದರ್ಭಗಳನ್ನು ತನ್ನೊಳಗೂ ಮಾಡಿಕೊಂಡು ತನ್ನ ಅರ್ಹತೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಅದು ನಡೆಸಿಯೇ ಇರುತ್ತದೆ. ಅದು ಸಾಹಿತ್ಯದ ನಿರಂತರ ಪ್ರಕ್ರಿಯೆ ಚರಿತ್ರೆಯ ಗ್ರಹಿಕೆಯನ್ನು ವಾಸ್ತವದ ಚಲನೆಯನ್ನು. ಅದು ಹೇಗೆ ಕಟ್ಟಿ ಕೊಡುತ್ತದೆ ಎನ್ನುವುದು ನಿರಂತರ ಪ್ರಕ್ರಿಯೆಯಾಗಿಯೇ ಕಾಡುತ್ತಿರುತ್ತದೆ.

ಇನ್ನೊಂದು ವ್ಯಾಖ್ಯಾನವನ್ನು ಗಮನಿಸುವುದಾದರೆ, ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗಳಿಗೆಲ್ಲ ಒಂದು ಸ್ವಂತಿಕೆ ಇದೆ, ಇತಿಹಾಸವಿದೆ, ಪರಂಪರೆಯು ಇದೆ. ಹಾಗಿದ್ದಲ್ಲಿ ನಮ್ಮ ಭಾಷೆಯು ಸಂಸ್ಕೃತದೊಡನೆ ಮಾಡಿಕೊಂಡ ವಿವಾಹದ ಫಲವಾಗಿ ಹುಟ್ಟಿದಂತಹ ಒಂದು ಪುರಾತನ ಪ್ರಸಿದ್ಧ ಸಾಹಿತ್ಯ ವಂಶಾವಳಿ ಎಂದು ಹೇಳುವ ಈ ನಿರ್ಣಯ ಎಷ್ಟರ ಮಟ್ಟಿಗೆ ಸರಿ ಎನಿಸುತ್ತದೆ. ಸಂಸ್ಕೃತ ಸಾಹಿತ್ಯ ನಮ್ಮ ಸಾಹಿತ್ಯಕ್ಕೆ ಮೂಲವಿರಬಹುದು. ಹಾಗೆಂದು ಸಂಸ್ಕೃತದಿಂದಲೇ ಹುಟ್ಟಿದೆ ಎಂದರೆ ಇದಕ್ಕೆ ಅರ್ಥವಿಲ್ಲ ಎಂದೇ ಹೇಳಬಹುದು. ಸಾಹಿತ್ಯ ಶಬ್ದದ ರೂಪ ನಿಷ್ಪತ್ತಿಯನ್ನು ಹಲವರು ಸಂಸ್ಕೃತದಿಂದ ವಿಚಾರ ಮಾಡಿದ್ದಾರೆ. ಸಾಹಿತ್ಯ ಎಂಬ ಶಬ್ದದ ರೂಪ ನಿಷ್ಪತ್ತಿಯನ್ನು ಹಲವು ಬಗೆಯಾಗಿ ತೋರಿಸಬಹುದು. ಮುಖ್ಯವಾಗಿ ಧರಿಸುವುದು ಅಥವಾ ಪೋಷಿಸುವುದು ಎಂಬ ಅರ್ಥವನ್ನು ಕೊಡುವ ಸಂಸ್ಕೃತದ 'ಧಾ' ಧಾತುವಿನ ಮೇಲೆ 'ಕ್ತ' ಪ್ರತ್ಯಯವನ್ನು ಹತ್ತಿಸಿ ಆದ 'ಹಿತಂ' ಎಂಬ ಶಬ್ದದ ಹಿಂದೆ 'ಸಮ್' ಎಂಬ ಉಪಸರ್ಗವನ್ನು

ಹತ್ತಿಸಿ ಆದ 'ಸಹಿತಂ' ಎಂದಾಗುತ್ತದೆ. ಇದಕ್ಕೆ ಭಾವಾರ್ಥಕ ಪ್ರತ್ಯಯವು ಸೇರಿ 'ಸಾಹಿತ್ಯ' ಎಂದಾಗುತ್ತದೆ. ಇದು ಸಂಸ್ಕೃತ ಕಣ್ಣಿನಿಂದ ಕನ್ನಡ ಸಾಹಿತ್ಯ ವ್ಯಾಕರಣ ಛಂದಸ್ಸು, ಭಾಷೆ ನೋಡಿದವರೆಲ್ಲಾ ಮಾಡುವ ತಪ್ಪಾಗಿದೆ[೮] ಎನ್ನುವ ಡಾ. ರಹಮತ್ ತರಿಕೇರೆಯವರ ಮಾತನ್ನು ಇಲ್ಲಿ ನೆನೆಯುವುದು ತುಂಬಾ ಅರ್ಥಪೂರ್ಣವಾಗುತ್ತದೆ. ಹೀಗೆ ಸಾಹಿತ್ಯವು ಕೇವಲ ಸಂಸ್ಕೃತ ಮಾತ್ರದಿಂದಲೇ ಅಲ್ಲ. ತನಗೆ ಅವಶ್ಯವೆನಿಸಿದ ಅಂಶಗಳನ್ನು ಇತರ ಭಾಷೆಗಳಿಂದಲೂ ಪಡೆಯುತ್ತಾ, ಬೆಳೆಯುತ್ತಾ, ತನ್ನಯುತ್ತಾ, ಸ್ವಂತಿಕೆಯನ್ನು ಉಳಿಸಿಸಿಕೊಂಡು ಅನನ್ಯವಾಗಿದೆ. ಹೀಗೆ ಸಾಹಿತ್ಯದ ಬಗ್ಗೆ ಅಧ್ಯಕ್ಷೀಯ ಭಾಷಣಗಳಲ್ಲಿ ಇನ್ನೂ ಅನೇಕ ಗ್ರಹಿಕೆಗಳನ್ನು ಕಾಣಬಹುದಾಗಿದೆ. ಇಂತಹ ಸಾಹಿತ್ಯದ ಕಾರ್ಯಗಳೇನು ಎನ್ನುವುದನ್ನು ಮುಂದಿನ ಭಾಗದಲ್ಲಿ ಗಮನಿಸಬಹುದಾಗಿದೆ.

ಸಾಹಿತ್ಯ ಶಬ್ದದ ಅರ್ಥವನ್ನು ಬೇರೆ ಬೇರೆ ವಿದ್ವಾಂಸರು ಒಂದೆ ತೆರನಾಗಿ ಮಾಡುತ್ತಾರೆ. ಮಹಾಮಹೋಪಾಧ್ಯಾಯ ಪಂಡಿತ ಶಿವದತ್ತ ಶರಣರು 'ಹೀತೀನ ಸಹವರ್ತಮಾನತ್ವಂ ಸಾಹಿತ್ಯಂ ಅಥವಾ ಸಹಿತನ್ನ ಭಾವ ಸಾಹಿತ್ಯಂ ಎಂದು ಮಾಡಿರುತ್ತಾರೆ. ಕೆಲವರು ಸಾಹಿತ್ಯವೆಂದರೆ ಸವಿನುಡಿಯೆಂದು, ಕೆಲವರು ಗ್ರಂಥಗಳ ರಾಶಿ ಎಂದು, ಮತ್ತೆ ಕೆಲವರು ಶ್ಲೋಕಗಳ ಸಮುದಾಯವೆಂದು ವಿವಿಧ ರೀತಿಯಿಂದ ಪ್ರತಿಪಾದಿಸುತ್ತಾರೆ. ಈ ಶಬ್ಧ ವ್ಯಾಪಕವಾದ ಅರ್ಥವುಳ್ಳದ್ದಾ ಗಿರುವುದರಿಂದ ಪ್ರತಿಯೊಂದು ಉದ್ಯೋಗದವರು ಇದನ್ನು ಉಪಯೋಗಿಸುತ್ತಾರೆ. ಅಡಿಗೆ ಮಾಡು ವವನು ಚಿತ್ರಗಾರನು ಒಕ್ಕಲಿಗನು ತನ್ನ ತನ್ನ ಸಾಮಾನುಗಳಿಗೆ ಸಾಹಿತ್ಯವೆಂದೇ ಹೇಳಿಕೊಳ್ಳುತ್ತಾರೆ. ಹಾಗಾದರೆ ಸಾಹಿತಿಗಳ ಸಾಹಿತ್ಯ ಕಾವ್ಯ'.[೯] 'ವಿಶಾಲವಾದ ಅರ್ಥದಲ್ಲಿ ಹೇಳುವುದಾದರೆ ಸಾಹಿತ್ಯವೆಂಬುದು ಒಂದು ದೃಷ್ಟಿಯಿಂದ ಲೇಖಕರ ಹಾಗೂ ವಾಚಕರ ನಡುವಿನ ಕೊಡುಕೊಳ್ಳುವ ವಸ್ತು'.[೧೦]

'ಶಬ್ದಾರ್ಥವೆಂಬ ಸಾಮಾನ್ಯ ವಚನದಲ್ಲಿ ವೇದ ಮೊದಲ್ಗೊಂಡು ಗೆಳೆಯರು ಅನೋನ್ಯವಾಗಿ ಬರೆಯುತ್ತಿರುವ ಪತ್ರದವರೆಗಿನವುಗಳು ಸೇರುತ್ತವೆ. ಮನುಷ್ಯನಲ್ಲಿ ಸಂಸ್ಕೃತಿಯನ್ನೊದಗಿಸಲಿಕ್ಕೆ ತಯಾರಾದ ಶಬ್ದಾರ್ಥಗಳ ಸಾಹಿತ್ಯವನ್ನೇ ಸಾಹಿತ್ಯಶಾಸ್ತ್ರವೆಂದು ಹೇಳುವುದು'.[೧೧]

ಹೀಗೆ ಸಾಹಿತ್ಯ ಎನ್ನುವುದರ ಅರ್ಥವು ಲಾಕ್ಷಣಿಕರ ಕಾಲದಿಂದ ಇಂದಿನವರೆಗೂ ನಿಖರವಾಗಿ ಇದೇ ಎಂದು ಹೇಳಲು ಆಗುವುದಿಲ್ಲ. ಕಾಲದಿಂದ ಕಾಲಕ್ಕೆ ಅದು ಬದಲಾಗುತ್ತಾ ಬೆಳೆಯುತ್ತಾ ಹೋಗುತ್ತದೆ ಎನ್ನುವುದನ್ನು ತಿಳಿಯಬಹುದು. ಪ್ರಸ್ತುತದಲ್ಲಿಯ ಸಾಹಿತ್ಯವನ್ನು ತನ್ನ ವ್ಯಾಪ್ತಿಯನ್ನು ಬಹಳವಾಗಿ ವಿಸ್ತರಿಸಿಕೊಂಡಿರುವುದನ್ನು ಕಾಣುತ್ತೇವೆ. 'ಸಾಹಿತ್ಯ' ಎನ್ನುವುದು ಕೇವಲ ಕೃತಿ, ಕಾವ್ಯ, ಮತ್ತು ಬರಹ ಸಂಸ್ಕೃತಿಗೆ ಮಾತ್ರ ಅನ್ವಯವಾಗುವುದಿಲ್ಲ. ಅದು ಎಲ್ಲಾ ಕ್ಷೇತ್ರಗಳಲ್ಲಿ ಎಲ್ಲರಿಗೂ ಅವಶ್ಯಕ. ಭಾಷಿಕವಾಗಿ ಲಿಪಿರೂಪದಲ್ಲಿ ಬಂದಾಗ 'ಸಾಹಿತ್ಯ' ವಿಶೇಷವಾದ ಅರ್ಥವನ್ನು ಪಡೆಯುತ್ತದೆ.

**೧. ಸಾಹಿತ್ಯದ ಸ್ವರೂಪ**

ಇದುವರೆಗೂ ಅಧ್ಯಕ್ಷರುಗಳು ಸಾಹಿತ್ಯ ಎಂದರೇನು ಎಂಬುದರ ಬಗ್ಗೆ ಏನು ಹೇಳಿದ್ದಾರೆ ಎನ್ನುವುದನ್ನು ಗಮನಿಸಿದ್ದೇವೆ. ಈ ಭಾಷಣಗಳಲ್ಲಿ ಸಾಹಿತ್ಯದ ಸ್ವರೂಪವನ್ನು ಹೇಗೆ ಹೇಳಿದ್ದಾರೆ, ಜೊತೆಗೆ ಅದರ ಉಪಾಂಗಗಳನ್ನು ಹೇಗೆ ಅರ್ಥೈಸಿದ್ದಾರೆ, ಸಾಹಿತ್ಯದ ಕಾರ್ಯದ ಬಗ್ಗೆ ಸಮಾಜ–ಸಾಹಿತ್ಯ ಸಾಹಿತ್ಯ–

ಜೀವನ ಸಾಹಿತ್ಯದ ಪ್ರಸಾರ ಇತ್ಯಾದಿಗಳ ಬಗ್ಗೆ ಯಾವ ರೀತಿಯ ಅಭಿಪ್ರಾಯಗಳನ್ನು, ಚಿಂತನೆಗಳನ್ನು ಮೂಡಿಸಿದ್ದಾರೆ ಎನ್ನುವುದನ್ನು ಈ ಭಾಗದಲ್ಲಿ ಗಮನಿಸಬಹುದು.

ಸಾಹಿತ್ಯ ಬದುಕುವುದನ್ನು ಕಲಿಸುತ್ತದೆ. ಸಮಾಜದಲ್ಲಿ ಸಮತೂಕದ ಜೀವನವನ್ನು ನಡೆಸಬೇಕಾದರೆ ಎಚ್ಚರ ಸದಾ ಕಣ್ಣು ತೆರೆದಿರಬೇಕು. ಆ ಕಣ್ಣು ತೆರೆದಿರುವಿಕೆಯ ಕೆಲಸವನ್ನು ಸಾಹಿತ್ಯ ಕಟ್ಟಿಕೊಂಡಿರುತ್ತದೆ. ಸಾಹಿತ್ಯವು ತನ್ನ ವಸ್ತುವನ್ನು ಸಮಾಜದಿಂದಲೇ ಆರಿಸಿಕೊಳ್ಳುತ್ತದೆ. ಆ ಸಮಾಜವೇ ಅದನ್ನು ಪೋಷಿಸುವ ಕೆಲಸವನ್ನು ಮಾಡುತ್ತಿರುತ್ತದೆ. 'ನಮ್ಮ ಜನರ ದುಡ್ಡು, ದುಡಿತ, ದೊಡ್ಡಸ್ತಿಕೆ ಈ ಮೂರು ಸಾಹಿತ್ಯ ವಾಙ್ಮಯ ಕಲೆ, ಕೌಶಲ್ಯ ಇವುಗಳಿಗೆ ಬೆಂಬಲ ಮುಂಬಲವಾಗಬೇಕು'.[೧೨] ಆದರೆ ಇಂದಿನ ದುಡ್ಡು, ದುಡಿಮೆ, ಕೌಶಲ್ಯಗಳೆಲ್ಲ ಮತ್ತೊಬ್ಬರ ಪಾಲಾಗುತ್ತಿವೆ. ಸಂಘಟನೆಯ ಕೊರತೆಯಿಂದಾಗಿ ದುಡ್ಡಿಗೆ, ದುಡಿಮೆಗೆ ಬೆಲೆಯಿಲ್ಲದಂತಾಗಿದೆ. ಈ ಎಲ್ಲವುಗಳನ್ನು ಸಾಹಿತ್ಯವು ತನ್ನ ಒಡಲಲ್ಲಿ ಕಟ್ಟಿಕೊಂಡಿರುತ್ತದೆ. ಈ ಜನಜೀವನದ ಬದುಕನ್ನೇ ಸಾಹಿತ್ಯ ಕಟ್ಟಿಕೊಡುತ್ತಿರುತ್ತದೆ. ಹಾಗೆಂದು 'ಸಾಹಿತ್ಯವು ಜನಜೀವನದ ಪ್ರತಿಬಿಂಬವಷ್ಟೇ ಆಗಲಾರದು. ಮಾಡಿದ್ದನ್ನೆ ಹೊಗಳಲಾರದು. ಹೊಸದೆಂದು ತೆಗಳಲಾರದು. ಸಾಹಿತ್ಯವು ಆತ್ಮಬಿಂಬ ವನ್ನು ತೆರೆದು ತೋರಿಸುವುದು. ಸಾಮಾಜಿಕ ಪರಿಸ್ಥಿತಿಗಳಲ್ಲಿ ಜೀವಂತ ಬದಲಾವಣೆ ನಡೆದಾಗಲೇ ಸಾಹಿತ್ಯವು ಜೀವಂತವಾಗುವುದು ಸಾಹಿತ್ಯವು ಮತಕ್ಕೆ ಮಣಿಯಬಾರದು ರಾಜಕಾರಣಕ್ಕೆ ಹಣಿಯ ಬಾರದು. ಹೊಸ ನಾಗರೀಕತೆ ಜಡವಾದ ಮೊದಲಾದವುಗಳಿಗೆ ದಣಿಯಬಾರದು ಸಾಹಿತ್ಯವು ಉತ್ತಮ ಜೀವನಕ್ಕೆ ಸಂಬಂಧಿಸಿದ್ದು'.[೧೩] ಜೀವನದ ಪೂರ್ಣತೆಯ ಹವಣಿಕೆ ಹೋರಾಟವು ಜೀವನದಲ್ಲಿ ಹೇಗೆ ನಡೆದಿದೆ ಇದನ್ನು ಸಾಹಿತ್ಯ ತೆರೆದುತೋರಿಸಬೇಕು. ಇದುವೇ ಸಾಹಿತ್ಯದ ಕಾರ್ಯ. ಸಾಹಿತ್ಯವು ಜನರನ್ನು ಸಮಾಜವನ್ನು ಅದಕ್ಕೂ ಹೆಚ್ಚಾಗಿ ಸಾಹಿತಿಗಳ ಮನಸ್ಥಿತಿಯನ್ನು ಅವಲಂಬಿಸಿದೆ. ಸಾಹಿತ್ಯದಿಂದೆನೋ ಅಧಿಕವಾದ ಸಮಸ್ಯೆಗಳು ಬಗೆಹರಿಯುವುದಿಲ್ಲ. ಆದರೆ 'ಈ ಅನ್ನದ ಅನ್ಯಾಯದ ಹಿಂದಿರುವ ಆತ್ಮಘಾತಕ ವ್ಯಕ್ತಿಯ ಬೇರಿನ ಹರವನ್ನು ಸಾಹಿತ್ಯ ತೋರಿಸಿ ಕೊಡಬಲ್ಲದು'.[೧೪] ಸಮಾಜದಲ್ಲಿ ಮೇಲು ಕೀಳಿನ ಮನೋಭಾವವನ್ನು ತೊಡೆದುಹಾಕಿ ಮಾನವರಲ್ಲಿ ಏಕತೆಯನ್ನು ಕಂಡು ವ್ಯಕ್ತಿಯನ್ನು ಬಗ್ಗಿಸದೆ, ಸಮಾಜವನ್ನು ತಗ್ಗಿಸದೆ, ಜೀವನವನ್ನು ಹಿಗ್ಗಿಸುವ ಹಾದಿಯನ್ನು ಸಾಹಿತ್ಯದಿಂದ ಕಂಡುಕೊಳ್ಳಬೇಕಾಗಿದೆ. ಇಂಥ ಸಾಹಿತ್ಯವು ಆಧುನಿಕವಾಗಿ ಹಲವು ಪ್ರಕಾರಗಳಲ್ಲಿ ಹರಿದು ಬರುತ್ತಿರುವುದನ್ನು ಕಾಣಬಹುದಾಗಿದೆ. ಕಥೆ, ಕಾದಂಬರಿ, ನಾಟಕ, ಜೀವನ ಚರಿತ್ರೆ, ಪ್ರಬಂಧ, ಆತ್ಮಚರಿತ್ರೆ, ವಿಮರ್ಶೆ, ಸಂಪಾದನೆ ಇತ್ಯಾದಿ ಪ್ರಕಾರಗಳಲ್ಲಿ ಹರಿದುಬರುತ್ತಿದೆ. ಶ್ರೇಷ್ಠ ಕೃತಿಗಳಲ್ಲಿ ಈ ನಿಟ್ಟಿನಲ್ಲಿ ರಚನೆಯಾಗುತ್ತದೆ. ಪ್ರಾರಂಭದ ಕಾವ್ಯಗಳಲ್ಲಿ ಕವಿತೆಗಳಲ್ಲಿ ಹೆಚ್ಚಿನ ಒಲವು ಮೂಡುತ್ತಿತ್ತು. ತದನಂತರ ಗದ್ಯ ಸಾಹಿತ್ಯವು ಸಾಹಿತ್ಯದ ವಿಶಾಲ ವ್ಯಾಪ್ತಿಯನ್ನು ಆವರಿಸಿಕೊಳ್ಳುತ್ತದೆ. ಈ ಎಲ್ಲಾ ಪ್ರಕಾರಗಳಲ್ಲಿಯ ಸಾಹಿತ್ಯದ ತುಡಿತವು ಆಳುವವರಿಗೆ ಮತ್ತು ಆಳುಗಳಿಗೂ ಸೇರಬೇಕೆಂಬ ಮನೋಭಾವವುಳ್ಳದ್ದಾಗಿದೆ. 'ಜೀವನದ ಒಂದು ಸಿದ್ದಿ ಸಾಹಿತ್ಯದಲ್ಲಿದ್ದಂತೆ ಸಾಹಿತ್ಯದ ಒಂದು ಸಿದ್ದಿ ಜೀವನದಲ್ಲಿದೆ. ಆ ಸಿದ್ದಿ ಜೀವನದ ಸತ್ಯವನ್ನು ಹೇಳುವುದರಲ್ಲಿದೆ. ಅಂತಹ ಸತ್ಯವನ್ನು ಬಿಚ್ಚಿಟ್ಟರೆ ಕಾಯ್ದೆ ಕೆರಳುವದು, ಕುಟುಂಬ ಶಪಿಸುವುದು, ಮತ ಬಹಿಷ್ಕರಿಸುವುದು, ಸಮಾಜ ಅಡ್ಡ ಹಾದಿ ಹಿಡಿಯುವುದು, ಸತ್ಯವನ್ನು ಹೇಳಬೇಕಾದರೆ ಕೇಳಬೇಕಾದರೆ ಹೊಸ ಮನಸ್ಸೆ ಹೊಸ ಮನುಷ್ಯರೇ

ಹೊಸ ಸಮಾಜ ಬೇಕು'.[೧೫] ಸಾಹಿತ್ಯದ ಧ್ವನಿಯನ್ನು ಸಾಮಾಜಿಕರು ಅರ್ಥೈಸಿಕೊಳ್ಳಬೇಕು. ಅಂತೆಯೇ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ರಚನೆಯಾಗುತ್ತದೆ. ಅದು ಸಾರ್ವಕಾಲಿಕವಾದ ಒಂದು ಗುಣವನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡಿರುತ್ತದೆ. ಇಂತಹ ಗುಣವನ್ನು ಅದು ಯಾವ ಭಾಷೆಯ ಮೂಲಕ ಅಂದರೆ ಪ್ರಾದೇಶಿಕ, ಗ್ರಾಂಥಿಕ, ಸಮ್ಮಿಶ್ರ ಭಾಷೆಗಳ ಮೂಲಕ ಪ್ರಯೋಗ ಮಾಡುತ್ತಿರುವುದನ್ನು ಕಾಣಬಹುದು. ಕಥೆ ಕಾದಂಬರಿಗಳಲ್ಲಿ ಆಡು ಭಾಷೆಯು ಪರಿಣಾಮಕಾರಿಯಾದರೆ ಕವಿತೆಯಲ್ಲಿ ಭಾವುಕವಾದ ನವಿರಾದ ಭಾಷೆ ಮಹತ್ವವನ್ನು ಪಡೆಯಿತು. ಈ ನಾಟಕಗಳಲ್ಲಿಯೂ ಆಡು ಭಾಷೆಯು ತನ್ನ ಸ್ಥಾನವನ್ನು ಪಡೆದುಕೊಂಡಿತು. ಒಂದು ಸಂದರ್ಭದಲ್ಲಿ ಆಡು ಭಾಷೆ /ಪ್ರಾದೇಶಿಕ ಭಾಷೆ ಸಾಹಿತ್ಯದ ಮಟ್ಟಕ್ಕೇರಬಾರದೆಂಬ ಕೆಲವು ವಿರೋಧಗಳು ಕಂಡು ಬಂದರೂ ಸಾಹಿತ್ಯದಲ್ಲಿ ಆಡುಭಾಷೆಯನ್ನು ಸಮರ್ಥವಾಗಿ ದುಡಿಸಿಕೊಳ್ಳುವ ಪ್ರಯತ್ನಗಳು ಸಫಲವಾದವು. ಕೆಲವರು ಕನ್ನಡಾಂಗ್ಲೋ ಭಾಷೆಯಲ್ಲಿ ಸಫಲರಾದದ್ದನ್ನು ಕಾಣಬಹುದು. 'ಸಾಹಿತ್ಯವನ್ನು ಒಂದೇ ರೀತಿಯಾಗಿದ್ದರೆ ಅದು ತನ್ನ ಓದುವ ವರ್ಗವನ್ನು ಸೀಮಿತಗೊಳಿಸುತ್ತದೆ. ಅದರಿಂದ ಶಿಶು ಸಾಹಿತ್ಯ, ವಯೋನುಪೂರ್ವ ಸಾಹಿತ್ಯ ಎಂದು ವಯಸ್ಸಿಗನುಗುಣವಾಗಿ ಸಾಹಿತ್ಯವನ್ನು ರಚಿಸಬೇಕು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ನಮ್ಮ ಸಾಹಿತ್ಯವು ಹೊಸ ದಿಕ್ಕಿನತ್ತ ಚಲಿಸಲು ಪ್ರಾರಂಭಿಸಿತು. ಇಂದು ಸಾಹಿತ್ಯ ತುಂಬಾ ಅವಶ್ಯಕವಾಗುತ್ತಿದೆ. 'ನಮ್ಮ ಭಾಷೆ ಉಳಿಯಬೇಕಾದರೆ ನಮ್ಮ ಜನ ಬದುಕಬೇಕಾದರೆ ಕನ್ನಡದಲ್ಲಿ ಜ್ಞಾನ ಪ್ರಚಾರವಾಗಬೇಕು. ಕನ್ನಡದಲ್ಲಿ ಜ್ಞಾನ ಸಾಹಿತ್ಯ ಬೆಳೆಯಬೇಕು'.[೧೬] ಸಾಹಿತ್ಯ ಸಮ್ಮೇಳನದ ಆರಂಭದ ಅಧ್ಯಕ್ಷರುಗಳಲ್ಲಿ ಸಾಹಿತ್ಯವು ಹಳೆಯ ವ್ಯಾಕರಣ, ಛಂದಸ್ಸು, ಕೃತಿ, ಭಾಷೆಯನ್ನು ಅನುಸರಿಸುವ ಗುಣ ಇರುವುದು ಸ್ಪಷ್ಟವಾಗುತ್ತದೆ. ಅಂದರೆ ಹಳೆಗನ್ನಡವಲ್ಲ. ಸಂಪ್ರದಾಯಬದ್ಧವಾದ ಸಾಹಿತ್ಯವನ್ನು ರಚಿಸಬೇಕು ಎಂದು ಹೇಳುತ್ತಿರುವುದು ಕಾಣುತ್ತದೆ. ಆಡುಭಾಷೆಯನ್ನು ಸಾಹಿತ್ಯದಲ್ಲಿ ತರುವುದನ್ನು ವಿರೋಧಿಸುತ್ತಿದ್ದಾರೆ. 'ಇದು ಅನಿಷ್ಟ ಪದ್ಧತಿ'[೧೭] ಎನ್ನುವುದು ಅವರ ವಾದ. ಇಲ್ಲಿ ಇನ್ನೊಂದು ಅಭಿಪ್ರಾಯವನ್ನು ಗಮನಿಸಬಹುದು. 'ನಮ್ಮ ರೋಮ ರೋಮಗಳಲ್ಲಿ ರಾಷ್ಟ್ರೀಯತ್ವವು ಕರ್ನಾಟಕತ್ವವು ತುಂಬಿದ್ದರೆ ಮಾತ್ರ ನಮ್ಮಿಂದ ಅತ್ಯಂತ ಉಜ್ವಲವಾದ ವಾಙ್ಮಯವು ಹುಟ್ಟಬಹುದು. ಇಲ್ಲದಿದ್ದರೆ ಎಂದೂ ಹುಟ್ಟುವುದಿಲ್ಲ. ಅಂದರೆ ನಾವು ವಿಶ್ವ ಸಂಸ್ಕೃತಿಯನ್ನೊಳಗೊಂಡು ರಾಷ್ಟ್ರೀಯತ್ವವನ್ನು ಕರ್ನಾಟಕತ್ವವು ಯಾವಾಗಲೂ ಅನುಸಂಧಾನ ಮಾಡಿಕೊಂಡೆ ವಾಙ್ಮಯವನ್ನು ಹುಟ್ಟುವುದಕ್ಕೆ ಪ್ರವೃತ್ತರಾಗಿರಬೇಕು. ಯಾವಾಗಲೂ ಸಾಹಿತ್ಯ ತನ್ನ ಕಾಲಮಾನದ ಅನುಸಂಧಾನವನ್ನು ಮಾಡಿಕೊಂಡೇ ಬೆಳೆಯುತ್ತದೆ. ಬೆಳೆಯಬೇಕಾಗಿದೆ. ಇಂತಹ ಸಾಹಿತಿಗಳು ಸತ್ಯದೃಷ್ಟಿ ಜನರ ಭಾವ ಬಯಕೆಗಳ ಬಗ್ಗೆ ಆಳವಾದ ಸಹಾನುಭೂತಿ ಸಾಹಿತ್ಯಕಲೆ ಇವು ಅವಶ್ಯವಾಗಿ ಇರಬೇಕಾದ ಗುಣಗಳು'.[೧೮] ಸಾಹಿತ್ಯ ಮತ್ತು ಬದುಕು ತುಂಬಾ ಹತ್ತಿರ ಅವು ಒಂದನ್ನು ಬಿಟ್ಟು ಇನ್ನೊಂದಿಲ್ಲ. ಅವು ಅವಳಿ ಜವಳಿ ಇದ್ದಂತೆ. 'ಬದುಕು ಪ್ರೇರಿಸದ ಸಾಹಿತ್ಯ ಬೊಬ್ಬಾಟ ಇದ್ದಂತೆ ಎಂದು ಸಾಹಿತ್ಯದ ಮಹತ್ವವನ್ನು ಕೆಲವರು ಹೇಳಿದ್ದಾರೆ. ಬದುಕಿನ ವಿವಿಧ ಅನುಭವಗಳನ್ನು ಸಾಹಿತ್ಯ ತನ್ನೊಡಲಲ್ಲಿ ಅಭಿವ್ಯಕ್ತಗೊಳಿಸುತ್ತಿರುವುದು. ಹಾಗೆಂದು ಬದುಕಿನ ಎಲ್ಲಾ ಅನುಭವಗಳನ್ನು ಬರೆದರೆ ಅದು ಸಾಹಿತ್ಯದ ಶುಚಿಯನ್ನು ಹಾಳು ಮಾಡುತ್ತದೆ.' ಸಾಹಿತ್ಯದಲ್ಲಿ ರುಚಿ ಹೇಗೆ ಬೇಕೋ ಹಾಗೇ ಸಾಹಿತ್ಯದಲ್ಲಿ ಶುಚಿಯು ಬೇಕು'.[೧೯] ಭಾಷೆಯನ್ನು ಬಳಸಿಕೊಳ್ಳುವುದರಲ್ಲಿ ಮತ್ತು ಭಾಷಾಭಿವೃದ್ಧಿಯಲ್ಲಿ ಈ

ಶುಚಿತ್ವವನ್ನು ಕಾಣಬಹುದು. ಆದ್ದರಿಂದ ಭಾಷೆಯ ಮೇಲಿನ ಹಿಡಿತದಿಂದ ಉತ್ತಮವಾದ ಸಾಹಿತ್ಯವನ್ನು ರಚಿಸಬಹುದು. ಅದು ಗ್ರಾಮ್ಯವಾಗಿರಬಹುದು, ಗ್ರಾಂಥಿಕವಾಗಿರಬಹುದು. ಏಕೆಂದರೆ ಭಾಷೆಯೇ ಸಾಹಿತ್ಯದ ಶರೀರ. ಭಾವಲೋಕದಲ್ಲಿ ಸೃಷ್ಟಿಸಿಕೊಂಡ ನಂತರವೇ ಆ ವಸ್ತು ಭಾಷಿಕವಾಗಿ ಲಿಪಿಯ ರೂಪದಲ್ಲಿ ಲೇಖನಿಯ ಮೂಲಕ ಹೊರಹೊಮ್ಮುತ್ತದೆ. ಸಮಾಜವು ಬದಲಾವಣೆ ಅಭಿವೃದ್ಧಿ ಹೊಂದಬೇಕಾದರೆ ಲೇಖನಿಯ ಕಾರ್ಯ ಮಹತ್ವದ್ದಾಗಿರುತ್ತದೆ.

'ಬುದ್ಧಿಯನ್ನು ಎಚ್ಚರಿಸಿ ಸೂಕ್ಷ್ಮಗೊಳಿಸಿ ಹಳೆಯ ಮತ್ತು ಅರ್ವಾಚೀನ ಮೌಢ್ಯಗಳಿಂದ ಅದನ್ನು ಪಾರು ಮಾಡಿ, ವಿಚಾರ ಪರತೆಯನ್ನು, ವೈಜ್ಞಾನಿಕ ದೃಷ್ಟಿಯನ್ನು ನೆಲೆಗೊಳಿಸಿ ಜನತೆಯನ್ನು ಸಮನ್ವಯ ಸರ್ವೋದಯ ಮತ್ತು ಪೂರ್ಣ ದೃಷ್ಟಿಗಳ ಕಡೆಗೆ ತಿರುಗಿಸುವ ಹೊರೆ ಹೊಣೆ ಎರಡು ಕತ್ತಿ ಕುಡುಗೋಲುಗಳಿಗೆ ಇರುವುದಕ್ಕಿಂತ ಹೆಚ್ಚಾಗಿ ಲೇಖನಿಯ ಮೇಲೆ ಬೀಳುತ್ತದೆ'.[೨೦] ಇಲ್ಲಿ ಕತ್ತಿ ಕುಡುಗೋಲುಗಳು ಸೂಚ್ಯವಾಗಿ ದುಡಿಯುವ ವರ್ಗ ಮತ್ತು ಪ್ರಭುತ್ವ ವರ್ಗವನ್ನು ಸೂಚಿಸುತ್ತಾ ಸಮಾಜದಲ್ಲಿ ಆ ವರ್ಗಕ್ಕಿಂತಲೂ ಸಾಹಿತಿಗಳ/ಲೇಖಕರ ಹೊಣೆ ಜವಾಬ್ದಾರಿಯನ್ನು ಎತ್ತಿ ತೋರಿಸುತ್ತಿದೆ. ಈ ಅಭಿಪ್ರಾಯ ಸಮಾಜದಲ್ಲಿ ಸಮಾನತೆಯನ್ನು ತರುವಲ್ಲಿ ಯಾವುದೇ ಒಂದು ವರ್ಗಕ್ಕೆ ಸಾಹಿತ್ಯ ಮೀಸಲಾಗಿರಬಾರದು. 'ನಮ್ಮ ಸಾಹಿತ್ಯ ಚರಿತ್ರೆಯನ್ನು ಕೂಡಾ ಜಾತೀಯತೆಯ ಆಧಾರದ ಮೇಲೆ ವಿಭಾಗಿಸುವ ನಾವು ನಮ್ಮ ನಾಡಿಗೆ ಬಂದಿರುವ ಮತ ಧರ್ಮದ ಸೋಂಕು, ಪರದೇಶಿಯಾದ ಕಮ್ಯೂನಿಸಂಗೂ ಕೂಡಾ ಜನಿವಾರವನ್ನೋ ಶಿವದಾರವನ್ನೋ ನಾಮವನ್ನೋ ವಿಭೂತಿಯನ್ನೋ ಲಿಂಗವನ್ನೋ ಶಿಲುಬೆಯನ್ನೋ ತೊಡಿಸದೇ ಬಿಡುವುದಿಲ್ಲ.'[೨೧] ಸಾಹಿತಿಯು ಎಷ್ಟು ಜಾಗೃತನಾಗಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಸಾಹಿತ್ಯವು ನಾನಾ ಪ್ರಯೋಜನಗಳಿಂದ ಅವಶ್ಯವಾಗಿದೆ. ಅವುಗಳಲ್ಲಿ ಕೆಲವನ್ನು ನೋಡಬಹುದು.

೧. ನಮ್ಮ ರಾಷ್ಟ್ರವನ್ನು ಸೆಕ್ಯೂಲರ್ ಸ್ಟೇಟ್ ಎಂದು ಸಾರಿದ್ದೇವೆ. ಎಂದರೆ ಸಮನ್ವಯದ ರಾಷ್ಟ್ರ ಎಂದರ್ಥ. ಎಲ್ಲಾ ಮತಗಳು ಧರ್ಮಗಳು, ಸತ್ಯದಡೆಗೆ ಕೊಂಡೊಯ್ಯುವ ಬೇರೆ ಬೇರೆ ಪಥಗಳು ಅನ್ಯಮತಗಳನ್ನು ಸಹಾನುಭೂತಿಯಿಂದ ಅರಿತು ಇತರರ ಸಾಮಾಜಿಕ ಜೀವನದೊಂದಿಗೆ ಮೈತ್ರಿಯಿಂದ ಬೆರೆತು ರಾಷ್ಟ್ರದ ಜನರಲ್ಲಿ ಸಹೋದರ ಭಾವವನ್ನು ಐಕ್ಯ ಮಂತ್ರದ ಬುದ್ಧಿಯನ್ನು ನೆಲೆಗೊಳಿಸಬೇಕು. ಈ ಕೆಲಸದ ಹೊಣೆ ಸಾಹಿತಿ ಸಾಹಿತ್ಯದ ಮೇಲಿದೆ.

೨. ನಮ್ಮ ರಾಷ್ಟ್ರವನ್ನು ರಿಪಬ್ಲಿಕ್ ಅಥವಾ ಪ್ರಜಾಪ್ರಭುತ್ವ ಎಂದು ಘೋಷಿಸಿದ್ದೇವೆ. ಅದರ ಗುರಿ ಸರ್ವೋದಯ. ಅಂದರೆ ಎಲ್ಲರ ಏಳಿಗೆಗೆ ಯಾವುದನ್ನು ಆಧ್ಯಾತ್ಮಿಕವಾಗಿ ಎಲ್ಲರು ಒಪ್ಪಿಕೊಳ್ಳುತ್ತಾ ಬಂದಿದ್ದಾರೆಯೋ ಅದನ್ನು ಲೌಕಿಕವಾಗಿ ಸಾಧಿಸುವುದಕ್ಕೆ ಅವಶ್ಯವಾದ ಮಾನಸಿಕ ಹಿನ್ನೆಲೆಯನ್ನು ಹೃದಯ ಪರಿವರ್ತನೆಯನ್ನು ಉಂಟು ಮಾಡಬೇಕು. ಆ ದಿಕ್ಕಿನಲ್ಲಿ ಸಾಹಿತ್ಯ ಮಾಡಬೇಕಾಗಿರುವ ಕೆಲಸ ಅತ್ಯಂತ ಮಹತ್ವವಾದುದು.

೩. ಮಾನವನ ಬ್ರಾಹ್ಮಿ ಪ್ರಜ್ಞಾ ವಿಕಾಸಕ್ಕೆ ಪೂರ್ವಭಿತ್ತಿ ರೂಪವಾಗಿರುವ ಪೂರ್ಣದೃಷ್ಟಿಯ ರಹಸ್ಯದಿಂದ ಪ್ರತಿಪಾದಿಸಿ ಯಾವುದೇ ವಿಷಯವನ್ನು ಪೂರ್ಣ ದೃಷ್ಟಿಯಿಂದ ತನ್ನ ಪ್ರಜ್ಞೆಯನ್ನು ಒರೆಗಲ್ಲಿನಲ್ಲಿ ಪರಿಪೂರ್ಣವಾಗಿ ಮೂಡಿಬರುವ ವಿಚಾರಗಳನ್ನು ರಸಪೂರ್ಣವಾಗಿ ಪ್ರತಿಪಾದಿಸು ವುದಾಗಿದೆ'.[೨೨]

ಅಧ್ಯಕ್ಷರುಗಳು ಸಾಹಿತ್ಯದ ಉಪಾಂಗಗಳಾದ ಕಾವ್ಯ ಮಿಮಾಂಸೆಯ ಬಗ್ಗೆಯೂ ಛಂದಸ್ಸು ವ್ಯಾಕರಣದ ಬಗ್ಗೆಯೂ ತಮ್ಮ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ. ಭಾಷಾಭಿಮಾನದಿಂದಾಗಿ ಕೆಲವರು ಹಳೆಯ ವಾದವನ್ನು ಒಪ್ಪಿಕೊಂಡರೆ ಭಾಷಾ ಸೌಕರ್ಯಕ್ಕಾಗಿ ಮತ್ತು ಆಧುನಿಕತೆಯಿಂದಾಗಿ ಹೊಸ ಹೊಸ ಪದ್ಧತಿಗಳನ್ನು ಸಾಹಿತ್ಯದಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನದ ಬಗ್ಗೆ ಒಲವು ತೋರಿಸಿದ್ದಾರೆ. ಭಾಷಾ ಸಾಹಿತ್ಯಗಳು ಪ್ರಸಾರವಾಗಬೇಕಾದರೆ ಅಲ್ಲಿ ಮುದ್ರಣ, ಪ್ರಕಾಶಕರು, ಪತ್ರಿಕಾ ವ್ಯವಸಾಯದವರು, ವಿಮರ್ಶಕರು, ಸಹೃದಯದವರು ಇವರೆಲ್ಲರ ಸಹಕಾರ ಪ್ರೋತ್ಸಾಹಗಳು ಪ್ರಮುಖವಾಗಿರುತ್ತವೆ. ಸಾಹಿತ್ಯ ಪ್ರಸಾರಗೊಳಿಸುವಲ್ಲಿ ಇವರ ಪಾತ್ರ ಮುಖ್ಯವಾಗಿರುತ್ತದೆ. ಜೊತೆಗೆ ಪುಸ್ತಕಗಳನ್ನು ಕೊಂಡು ಓದುವ ವಾಚನಾಭಿರುಚಿ ಎಲ್ಲರಲ್ಲೂ ಬರಬೇಕಾಗಿದೆ. 'ಒಮ್ಮೊಮ್ಮೆ ಈ ಪ್ರಕಾಶಕರು ಲೇಖಕರಿಗೆ/ ಸಾಹಿತಿಗಳಿಗೆ ಶತೃಗಳಂತೆ ಪರಿಣಮಿಸುತ್ತಾರೆ.'[೨೩] ಸಾಹಿತಿಗಳ ಶ್ರಮ ಮತ್ತು ಸಾಧನೆಗಳನ್ನು ಗುರುತಿಸಿ ಪುರಸ್ಕಾರಗಳನ್ನು ನೀಡುತ್ತಿರಬೇಕು. ಪತ್ರಿಕೆಗಳಲ್ಲಿ ಸಾಹಿತ್ಯದ ಪ್ರಸಾರ ಕಾರ್ಯ ನಡೆಯುತ್ತಿರಬೇಕು ಇತ್ಯಾದಿಯಾಗಿ ಸಾಹಿತ್ಯ ಪ್ರಸಾರದ ಕುರಿತು/ಅಭಿವೃದ್ಧಿಯ ಕುರಿತು ಚರ್ಚಿಸಿದ್ದನ್ನು ಕಾಣಬಹುದು.

**೨. ಸಾಹಿತಿಗಳ / ಲೇಖಕರ ಬಗ್ಗೆ**

ಸಾಹಿತ್ಯ ಸಮ್ಮೇಳನಗಳಲ್ಲಿ ಕವಿ/ಸಾಹಿತಿ/ಲೇಖಕರ ಬಗ್ಗೆ ಏನು ಹೇಳಲಾಗಿದೆ ಎನ್ನುವುದು ಈ ಭಾಗದಲ್ಲಿನ ವಿಷಯವಾಗಿದೆ. ಸಾಹಿತಿ ಎಂದರೆ ಯಾರು? ಆತನ ಕರ್ತವ್ಯಗಳೇನು? ಸಮಾಜದಲ್ಲಿ ಆತನ ಪಾತ್ರವೇನು? ಇತ್ಯಾದಿ ಪ್ರಶ್ನೆಗಳಗೆ ಈ ಅಧ್ಯಕ್ಷೀಯ ಭಾಷಣಗಳಲ್ಲಿ ಅಧ್ಯಕ್ಷರ ಗ್ರಹಿಕೆಗಳ ಮೂಲಕ ತಿಳಿಯಬಹುದು. "ಆತ್ಮೋದ್ಧಾರದ ನಿಜಮಾರ್ಗವನ್ನು ತನ್ನ ಸವಿ ನುಡಿಯಿಂದ ಜಗತ್ತಿನ ಮುಂದಿಡುವವನೇ ಕವಿ. ಆತ್ಮೋದ್ಧಾರವೆಂದರೆ ಆತ್ಮನ ಇರವು, ಅರಿವು, ಆನಂದ ಪಡುವವನೆ ಕವಿ ಇವುಗಳ ವಿಕಾಸ ತತ್ವ ವಿಮರ್ಶೆ ಸಾಹಿತ್ಯವೆಂದರೆ ಸವಿನುಡಿ ಎಂದು ಕೆಲವರು ಹೇಳುವುದುಂಟು. ಇಂತಹ ಸವಿನುಡಿಯನ್ನು ಯಾರ ಮೂಲಕ ಅದು ಭಾಷಿಕವಾಗಿ ಲಿಪಿ ರೂಪದಲ್ಲಿ ಪ್ರಕಟವಾಗುತ್ತದೆಯೋ ಅವನೇ ಕವಿ. ಇಂಥ ಕವಿಯೂ ಸದಾ ಜೀವಂತವಾಗಿರುತ್ತಾನೆ. ತನ್ನ ಬರಹಗಳಲ್ಲಿ ಇಲ್ಲಿ ಆತ್ಮೋದ್ಧಾರವೆಂದರೆ ಹೀಗೆ ಕವಿಯು ಜನನ ಮರಣಗಳಿಂದ ದೂರವಾಗಿ ಸದಾ ಇರತಕ್ಕವನು. ಅರಿವಿನ ಮತ್ತು ಆನಂದದ ವಿಕಾಸವೆಂದರೆ ಸರ್ವಜ್ಞತೆ ಸದಾನಂದ ಸ್ಥಿತಿ ಕವಿಯಲ್ಲಿ ಭಿತ್ತಿದ ಏಕಾಗ್ರತೆಯೂ, ತತ್ವವಿಚಾರವೂ ಆ ವಿಚಾರದಿಂದುಂಟಾದ ಸ್ವಾನುಭವವೂ ಆ ಅನುಭವವನ್ನು ಜಗತ್ತಿನ ಮುಂದಿಡುವ ಶಕ್ತಿಯೂ ಇರುವವು. ಅಷ್ಟೇ ಅಲ್ಲ ಅವನಿಗೆ ಸಂಸಾರ ಸಂಬಂಧವಾದ ಎಷ್ಟೇ ಕಷ್ಟ ನಷ್ಟಗಳು ಸಂಭವಿಸುತ್ತಿದ್ದರೂ ಅವುಗಳಿಂದ ದುಃಖಿತನಾಗದೇ ಸೃಷ್ಟಿ ಸೌಂದರ್ಯದಿಂದ ಆನಂದದಲ್ಲಿ ಮೈಮರೆಯುವನು. ಈ ಆನಂದದಲ್ಲಿ ಹೊರಚೆಲ್ಲಿದ ಸವಿನುಡಿಯನ್ನು ಸವಿದು ಜಗತ್ತಿನಲ್ಲಿರುವ ಸಹೃದಯರು ಆನಂದದಿಂದ ಮೈ ಮರೆಯುವರು'.[೨೪] ಇದು ನಮ್ಮ ನವೋದಯ ಕಾಲದಲ್ಲಿ ಪ್ರಚಲಿತವಿದ್ದ ಕವಿಯ ಬಗೆಗಿನ ಅಭಿಪ್ರಾಯ. ಬಹುಶಃ ಭಾರತೀಯ ಕಾವ್ಯವಿಮಾಂಸೆಯಲ್ಲಿ ಲಾಕ್ಷಣಿಕರು ಹೇಳಿರುವ ವಿಚಾರವೂ ಇದೇ ತಾನೇ. ನಿಯತಿಕೃತ ನಿಯಮಾ ರಹಿತವೂ, ಆಹ್ಲಾದ ಮೈಮಮೈಕ್ಯವೂ, ಅನನ್ಯ ಪರತಂತ್ರ ಸಮರಸ ರುಚಿಕರವೂ ಆದ ನಿರ್ಮಿತಿಯನ್ನು (ನವಸೃಷ್ಟಿ) ನಿರ್ಮಿಸುವುದು ಅದುವೇ ಸಾಹಿತ್ಯ/ಕಾವ್ಯ. ಆ ನಿರ್ಮಾತೃವೇ ಕವಿ ಎನ್ನುವುದು ನವೋದಯದ ಮನಸ್ಸುಗಳು ಸಾಹಿತ್ಯವನ್ನು

ಸಾಹಿತಿಯನ್ನು ಈ ನಿಟ್ಟಿನಲ್ಲಿಯೇ ಅರ್ಥೈಯಿಸಲು ಹೊರಟಿದ್ದಾರೆ ಎನ್ನುವುದು ಖಚಿತವಾಗುತ್ತದೆ. ಆದರೆ ಅಪವಾದವೆನ್ನುವಂತೆ ಕೆಲವರು ಬೇರೆ ರೀತಿಯ ಯೋಚನೆಯನ್ನೇ ಮಾಡಿದ್ದಾರೆ. ಸೃಷ್ಟಿ ಸೌಂದರ್ಯವೊಂದೇ ಆತನ ಜಗತ್ತಿನ ಶ್ರೇಷ್ಠ ವಸ್ತುವಲ್ಲ. ಅದಕ್ಕೂ ಮೀರಿರುವುದು ಬದುಕು ಎಂಬ ಅಭಿಪ್ರಾಯವನ್ನು ಆ ಸಮಕಾಲೀನ ಕವಿಗಳಲ್ಲಿಯೇ ಕಾಣಬಹುದು. ಮತ್ತೊಂದು ವಿಚಾರವೆಂದರೆ ಕವಿಯು ಯಾವ ರೀತಿಯ ಯೋಗ್ಯತೆಗಳನ್ನು ಹೊಂದಿರಬೇಕು ಎಂಬುದನ್ನು ಹೇಳುತ್ತಾರೆ. 'ಒಂದು: ಬಾಹ್ಯ ಪ್ರಪಂಚದಲ್ಲಿ ನಡೆದ ಒಂದು ಘಟನೆ. ಅದರ ಅವಲೋಕನದಿಂದುಂಟಾದ ತೀವ್ರ ರಸಾನುಭವ. ಆ ರಸಾನುಭವದ ಪರಿಣಾಮವಾಗಿ ಮನಸ್ಸಿನಲ್ಲಿ ತಲೆದೋರಿದ ಒಂದು ವ್ಯಾಕುಲ; ಆ ವ್ಯಾಕುಲದಿಂದ ಹುಟ್ಟಿದ ವಿಚಾರಪರತೆ. ಎರಡು: ಹಿರಿಯರಿಂದಾದ ಕಥಾಕಥನ; ಅದರಿಂದ ಕವಿಯ ಹೃದಯದಲ್ಲಾದ ವಸ್ತು ಭಂಡಾರದ ಪರಿಪೂರ್ಣ. ಮೂರು: ಪಾತ್ರಗಳ ಬಾಹ್ಯಭ್ಯಂತರ ವ್ಯಾಪಾರಗಳ ಸ್ಪಷ್ಟವಾದ ಗ್ರಹಣಶಕ್ತಿ. ಅನ್ಯತವಲ್ಲದ ವಾಕ್ಕಿನಿಂದ ಯಥಾವತ್ತಾಗಿ ನಿರೂಪಣೆ ಮಾಡುವ ಶಕ್ತಿ. ನಾಲ್ಕು: ವಸ್ತು ಭಂಡಾರವನ್ನು ಭಾವ ಭಂಡಾರಕ್ಕೂ ಅನುಗುಣವಾದ ಸರಸ್ವತಿ ಪ್ರಸಾದ. ಇವು ಕವಿಗೆ ಅಗತ್ಯವಾದ ಯೋಗ್ಯತೆಗಳು'.[೨೫] ಒಬ್ಬ ಸಮರ್ಥ ಕವಿಯೂ ಬಾಹ್ಯ ಪ್ರಪಂಚದಿಂದ ಪಡೆದ ಅನುಭವವನ್ನು ತನ್ನ ವೈಚಾರಿಕತೆಯಿಂದ, ತನ್ನ ಪ್ರತಿಭೆಯಿಂದ, ಸ್ಪಷ್ಟ ಗ್ರಹಣ ಶಕ್ತಿಯಿಂದ ಹೊಸದಾಗಿ ಕಟ್ಟಿಕೊಡುವ ಗುಣ/ಯೋಗ್ಯತೆಯುಳ್ಳವನೇ ಕವಿ ಎನ್ನುವುದಾಗಿ ಅರ್ಥೈಸಿದ್ದಾರೆ.

ಸಾಹಿತ್ಯ ಒಂದು ತಪಸ್ಸು. ಸಾಹಿತಿಯೂ ಋಷಿಯಂತೆ. ಹಾಗೆಂದು ಸಾಹಿತಿಗಳು ಬರೆದುದೆಲ್ಲವೂ ಸಾಹಿತ್ಯ ಆಗಲಾರದು. ಏಕೆಂದರೆ 'ಸಾಹಿತ್ಯ ಸೃಷ್ಟಿಯು ಒಳ್ಳೆಯ ಬದುಕಿನ ಪ್ರತಿಫಲವಾಗಿ ಹುಟ್ಟಬಹುದಾದ ಸವಿಗೆನೆ.'[೨೬] ಸಾಹಿತ್ಯ ಮತ್ತು ಬದುಕು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದರ ಬೆನ್ನ ಹಿಂದೆ ಒಂದು ಅಂಟಿಕೊಂಡು ಇರುತ್ತವೆ. 'ಜೀವನಕ್ಕೂ ಮತ್ತು ತನಗೂ ಇರುವ ಸಂಬಂಧವೇನು ಎಂದು ತಿಳಿಯಲು ಪ್ರಯತ್ನಿಸಿ ಅದರಿಂದ ಬಿಡುಗಡೆಗೊಳ್ಳಲು ಕಂಡುಕೊಂಡ ಮಾರ್ಗವೇ ಸಾಹಿತ್ಯಕಲೆ. ಇಂತಹ ಬದುಕಿನ ಹೋರಾಟದಲ್ಲಿ ಸಾಹಿತಿಗೆ ಆತ್ಮವಿಶ್ವಾಸ ತುಂಬಾ ಅವಶ್ಯಕ. ಸಾಹಿತಿಯಾದವನು ಬದುಕನ್ನು ನೀತಿ, ಅನೀತಿಗಳಿಗೆ ಅತೀತನಾಗಿ ನಿಂತು ನಿರೀಕ್ಷಿಸಿ ನೋಡಬೇಕಾಗಿದೆ'.[೨೭] ಹಾಗೆಂದು ಸಾಹಿತ್ಯದಲ್ಲಿ ಬರೆಯುವುದೆಲ್ಲವೂ ಸತ್ಯ. ಸತ್ಯಕ್ಕೆ ಕನ್ನಡಿ ಹಿಡಿಯುತ್ತೇವೆಂದು ನಮ್ಮ ಸಾಹಿತಿಗಳು ಹೇಳುತ್ತಾರೆ.

'ಆದರೆ ಈ ಸತ್ಯ ಎಷ್ಟು ವಿಸ್ತಾರವಾಗಿ ಹರಡಿ ಚೆಲ್ಲಿ ಬಿದ್ದಿದೆ, ಎಷ್ಟು ಮನೋಧರ್ಮಗಳ ಪರಿಪಾತದಿಂದ ರೂಪಿತವಾಗಿದೆ, ಎಷ್ಟು ಕಟ್ಟಳೆಗಳ ಸೆರಗಿನಲ್ಲಿ ಸಿಕ್ಕಿಕೊಂಡಿದೆ, ಎಂಬುದನ್ನು ತಿಳಿಯುವುದಕ್ಕೆ ಪ್ರಯತ್ನಿಸುತ್ತಿರುತ್ತಾರೆ'[೨೮] 'ಸಾಹಿತಿಯಾದವನಿಗೆ ಮಾನವೀಯತೆಯ ಉತ್ತಮ ಭಾವ ಸಂಸ್ಕಾರಗಳು ಇರುವುದು ಅನಿವಾರ್ಯ. ಭಾವನೆಗಳು ಸಂಸ್ಕಾರಗೊಂಡಾಗ ಮಾತ್ರ ಸಾಹಿತ್ಯದಲ್ಲಿ ಶುಚಿತ್ವವನ್ನು ತರಲು ಸಾಧ್ಯ. ಸಾಹಿತ್ಯದಲ್ಲಿ ಶುಚಿತ್ವ ಎಂಬುದಿದೆಯೆ? ಜನಪದ ಪ್ರತಿಯೊಂದು ವಿಚಾರವನ್ನು ಯಥಾವತ್ತಾಗಿ ಸಾಹಿತ್ಯದಲ್ಲಿ ತರಲು ಸಾಧ್ಯವಿಲ್ಲ. ಸಾಹಿತಿಯಾದವನು ತನ್ನ ಭಾವನೆಗಳನ್ನು ಸಂಸ್ಕಾರಗೊಳಿಸಿದಲ್ಲಿ ಮಾತ್ರ ಉತ್ತಮ ಕೃತಿಯನ್ನು ನೀಡಲು ಸಾಧ್ಯ. ಲೌಕಿಕ ರಸಗಳ ಯಥಾ ರೂಪಾನುಕರಣವು ಸಾಹಿತ್ಯ ಧರ್ಮವಲ್ಲ. ಹಾಗಾದರೆ ಸಾಹಿತಿಯ ಸಾಹಿತ್ಯದ ಧರ್ಮ ಯಾವುದು? ಸಾಹಿತಿಯು ಯಾವ ಸಂದೇಶವನ್ನು ಕೊಡಬಲ್ಲನು? ಯಾವ ಸಮಾಜದೊಡನೆ ಸಂವಾದಿಸಬಲ್ಲನು? ಯಾವ ಕೃತಾರ್ಥತೆಯನ್ನು ಪಡೆಯಬಲ್ಲನು? ಊಹಿಸುವುದೇ

ಕಷ್ಟವಾಗಿದೆ'.[೨೯] 'ಲೇಖಕರ ವೃತ್ತಿ ಇಂದು ಅಷ್ಟೊಂದು ಸಮಾಧಾನಕರವಾಗಿಲ್ಲ. ರಾತ್ರಿ ಬರೆದು ಬೆಳಿಗ್ಗೆ ಎಲ್ಲಾ ಹೆಸರು ಪಡೆಯುವ ಉದ್ದೇಶದಿಂದ ವಿಚಾರಗಳನ್ನೋ, ಕಲ್ಪನೆಗಳನ್ನೋ, ಪದಗಳನ್ನೋ ಕಳವು ಮಾಡಿ ತಿದ್ದಿ ತೀಡಿ ಮರುದಿವಸ ವೃತ್ತಪತ್ರಿಕೆಯಗಳಲ್ಲಿ ಬರುವ ಬದುಕಿನಿಂದ ಸಾಹಿತ್ಯವನ್ನು ತುಂಬಾ ಗೌಣವಾಗಿಸುವುದುಂಟು. ಕೇವಲ ರಂಜನೆಯೂ ಕೂಡ ಲೇಖಕರ ಉದ್ದೇಶವಾಗಬಾರದು. ಲೋಕಪ್ರಿಯವಾಗುವುದೇ ಅವನ ಉದ್ದೇಶವಾಗಿರಬಾರದು. ಜನಮನಗಳ ಮಟ್ಟವನ್ನು ಮೇಲಕ್ಕೇರಿಸುವುದೇ ಅವನ ಧ್ಯೇಯವೆಂದು ಹೇಳಬಹುದು. ಸತ್ಯ, ದೃಷ್ಟಿ ಜನರ ಭಾವ, ಬಯಕೆಗಳ ಬಗ್ಗೆ ಆಳವಾದ ಸಹಾನುಭೂತಿ ಸಾಹಿತ್ಯ ಕಲೆ ಇವು ಲೇಖಕರಲ್ಲಿ ಮುಖ್ಯವಾಗಿ ಅವಶ್ಯ'.[೩೦] ಸತ್ಯದೃಷ್ಟಿ–ಸತ್ಯ ಎಂದರೇನು? ಯಾವ ಸತ್ಯವನ್ನು ಯಾರ ಸತ್ಯವನ್ನು ಸಾಹಿತಿ ಹೇಳಲು ಸಾಧ್ಯ. ಸತ್ಯೋಪಾಸನೆ ಎಂಬುದು ಅಷ್ಟು ಸುಲಭವಲ್ಲ. 'ನಮ್ಮ ಸಾಮಾಜಿಕ ರಾಜಕೀಯ ಬಾಳುವೆಯೇ ಅಷ್ಟು ಪ್ರತಿಷ್ಠಿತವಾಗಿದೆ. ಅದಕ್ಕೆ ಧರ್ಮಶಾಸ್ತ್ರದ ಕಾಯ್ದೆ ಕಾನೂನಿನ ನ್ಯಾಯದ ಮುದ್ರೆ ಬಿದ್ದಿದೆ. ಸತ್ಯದ ಪ್ರಶ್ನೆ ನ್ಯಾಯಕ್ಕೆ ಗೌಣವೆನಿಸುತ್ತದೆ. ಮಡಿವಂತರಿಗೆ ಸತ್ಯವು ಭಯಾನಕವಾಗಿ, ಭೀಭತ್ಸವಾಗಿ ಕಾಣುತ್ತದೆ. ಆದರೆ ಸಾಹಿತ್ಯವು ಇದೆಲ್ಲವನ್ನು ಧ್ವನಿಯಿಂದ ಹೇಳುತ್ತಲೇ ಬಂದಿದೆ'.[೩೧]

'ಇನ್ನೊಂದು ಮಹತ್ವದ ಸಂಗತಿ ಎಂದರೆ ಸಾಹಿತಿಗೆ 'ವಿನಯಶೀಲತೆ' ತುಂಬಾ ಅಗತ್ಯ. ಎಷ್ಟು ಬರೆದರೂ ಹೊಸತನ್ನು ನೋಡಿದಂತೆ ಹೊಸದನ್ನು ಕಲಿಯಲು ಜಿಜ್ಞಾಸೆ ವಿದ್ಯಾರ್ಥಿ ಎಂಬದು ವಿನಯ. ವಿನಯವಿಲ್ಲದೆ ಹೋದರೆ ತಾವು ಬರೆದುದೆಲ್ಲವು ಒಳ್ಳೆಯದು ಎಂಬ ಭ್ರಮೆಯಲ್ಲಿ ಮುಳುಗಿ ಹೋಗುವ ಸಾಧ್ಯತೆಯುಂಟು. ಸಾಹಿತ್ಯ ಮತ್ತು ಜೀವನ ಕುರಿತು ಮತ್ತೆ ಕೆಲವು ವಿಚಾರಗಳು ಜೀವನವೆನ್ನುವುದು ಬೃಹತ್ ಮತ್ತು ಮಹತ್ತುಗಳ ಮೊತ್ತವಾಗಿದೆ. ಇಂತಹ ಜೀವನದ ಯಾವ ಭಾಗವನ್ನು ಯಾವ ಪ್ರಮಾಣದಲ್ಲಿ ಸಾಹಿತಿ ತನ್ನ ಕೃತಿಗಳಲ್ಲಿ ಪ್ರತಿಬಿಂಬಿಸಬೇಕು. ಸಾಹಿತ್ಯವು ಜೀವನದ ಪ್ರತಿಬಿಂಬ ಎಂದು ಇಲ್ಲಿ ಹೇಳಲಿಕ್ಕಾಗುತ್ತದೆಯೇ? 'ರಾಜ್ಯಪಾಲರಿಗೆ ಸಾಹಿತಿಯ ವಿಚಾರಶಕ್ತಿ ಅಧೀನವಾಗಿರಬೇಕೆಂಬ ವಾದವೂ ಇದೆ'.[೩೨] ಇಲ್ಲಿ ಅಧೀನವಾಗಿರುವ ವಿಚಾರವು ಯಾವುದನ್ನು ನ್ಯಾಯವಾಗಿ ನೇರವಾಗಿ ಸತ್ಯವಾಗಿ, ಪ್ರಾಮಾಣಿಕವಾಗಿ ಹೇಳಲು ಬರುವುದಿಲ್ಲ. ಇಂಥ ಪರಿಸ್ಥಿತಿಯನ್ನು ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಕಾಣಬಹುದು. ಸಾಹಿತಿಯು ಜನತೆಯ ಶಿಕ್ಷಕ ಎಂಬ ಮಾತನ್ನು ಗಮನಿಸಬಹುದು. ಈ ಮೇಲಿನ ಎಲ್ಲಾ ವ್ಯಾಖ್ಯಾನಗಳು, ಅಭಿಪ್ರಾಯಗಳು ಸಾಹಿತಿ/ಲೇಖನ, ಗುಣ ವ್ಯಕ್ತಿತ್ವ ಹೊಣೆ, ಪ್ರತಿಭೆ, ಇತ್ಯಾದಿಗಳ ಬಗ್ಗೆ ಹೇಳಿರುವುದನ್ನು ಕಾಣಬಹುದು.

**೩. ವಿಮರ್ಶಕರ ಬಗ್ಗೆ**

ವಿಮರ್ಶೆ ಎನ್ನುವ ಪರಿಭಾಷೆ ನಮಗೆ ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದ ಉಂಟಾದುದು. ಸಾಹಿತ್ಯದಲ್ಲಿ ವಿಮರ್ಶೆ ಅಥವಾ ವಿಮರ್ಶಕನ ಸ್ಥಾನ ಏನು? ಎಂದು ಪ್ರಶ್ನಿಸಿಕೊಂಡರೆ ಒಂದು ಕೃತಿ ತಾನು ಯಾವ ರೀತಿಯಲ್ಲಿ ವಿಶೇಷವಾಗಿದೆ, ಹೇಗೆ ವಿಶೇಷವಾಗಿದೆ ಮತ್ತು ಏಕೆ ವಿಶೇಷವಾಗಿದೆ ಎನ್ನುವುದನ್ನು ಯಾವುದೇ ಪೂರ್ವಗ್ರಹಪಿಡಿತನಾಗದೆ ವಿಮರ್ಶಕನು ಕೈಗೊಳ್ಳುವ ಕೆಲಸವೇ ವಿಮರ್ಶೆ. ಒಂದು ಕೃತಿಯ ಬಗ್ಗೆ ನಿಷ್ಠುರವಾಗಿ ಯಾವುದೇ ಮುಲಾಜುಗಳಿಗೆ ಸಿಕ್ಕಿಹಾಕಿಕೊಳ್ಳದೆ ಅದರಲ್ಲಿರುವ ಸರಿ ತಪ್ಪುಗಳನ್ನು ಎತ್ತಿ

ತೋರಿಸುವುದು ಈ ವಿಮರ್ಶೆಯ ಕೆಲಸ. ಅಂದ ಮೇಲೆ ನಮ್ಮ ಸಮ್ಮೇಳನಗಳ ಅಧ್ಯಕ್ಷರು ಈ ವಿಮರ್ಶೆ ಅಥವಾ ವಿಮರ್ಶಕನ ಬಗ್ಗೆಯೂ ಚರ್ಚಿಸಿದ್ದುಂಟು. ಅದನ್ನು ಈ ಮುಂದಿನಂತೆ ಗಮನಿಸಬಹುದು. 'ಉತ್ತಮ ವಿಮರ್ಶೆ ಇಲ್ಲದೆ ಉತ್ತಮ ಸಾಹಿತ್ಯ ನಿರ್ಮಾಣ ವಾಗಲಾರದು'.[೩೩] ಲೇಖಕ/ಕವಿ/ಸಾಹಿತಿ ಮತ್ತು ಓದುಗ/ಸಹೃದಯದ ಮಧ್ಯೆ ಸೇತುವೆಯಂತೆ ವಿಮರ್ಶಕ ಕಾರ್ಯ ನಿರ್ವಹಿಸುತ್ತಿರುತ್ತಾನೆ. ಸಹೃದಯ ಕೃತಿಯ ರಸಾಸ್ವಾದನೆ ಮಾಡಲು ಅನುಕೂಲವಾಗುವಂತೆ ಕಾವ್ಯದ ಆಂತರ್ಯವನ್ನೆಲ್ಲಾ ಎಳೆಯೆಳೆಯಾಗಿ ತೆಗೆದು ತೋರಿಸುತ್ತಾನೆ. ಆದ್ದರಿಂದ ಸಾಹಿತ್ಯವು ರಚನೆಯಾದ ಮೇಲೆ ಅದು ಸಹೃದಯ ಅಥವಾ ಓದುಗನಿಗೆ ಮುಟ್ಟಿದಾಗಲೇ ಅದರ ಹುಟ್ಟು ಸಾರ್ಥಕ. ಆದ್ದರಿಂದ ಇಲ್ಲಿ ನೇರವಾಗಿ ಆ ಸಾಹಿತ್ಯವು ಓದುಗನ ಮನಸ್ಸಿನಲ್ಲಿ ಬೆಳೆಯುವುದು ಕಷ್ಟವಾಗಬಹುದು. ಅದನ್ನು ಸುಗಮಗೊಳಿಸುವ ಜವಾಬ್ದಾರಿಯನ್ನು ವಿಮರ್ಶಕ ಹೊತ್ತಿರುತ್ತಾನೆ. ಭಾವಪೂರ್ಣವಾಗಿ ಬರೆದಿರುವಂತಹ ಕವಿ/ಲೇಖಕನ ವಿಚಾರಗಳು ಕೆಲವು ಸಂದರ್ಭದಲ್ಲಿ ಸೂಚಕವಾಗಿರುತ್ತವೆ. ಅದು ಸಹೃದಯನಿಗೆ ಕೆಲವು ವೇಳೆ ಅರ್ಥವಾಗದಿರುವ ಸಂದರ್ಭವುಂಟು. ಸಾಹಿತಿಯಷ್ಟೇ ಪ್ರತಿಭೆಯನ್ನು ವಿಮರ್ಶಕ ಪಡೆದಿರುವುದು ಅವಶ್ಯಕವಾಗಿದೆ. ಆಗಲೇ ಉತ್ತಮ ವಿಮರ್ಶೆಯನ್ನು ಮಾಡಲು ಸಾಧ್ಯ. ಕವಿಯ ಇಂಗಿತವನ್ನು ಕಾವ್ಯದ ಆಂತರ್ಯ ವನ್ನು ವಿಮರ್ಶಕನು ಉಳಿದವರಿಗಿಂತಲೂ ಹೆಚ್ಚು ಅರ್ಥಮಾಡಿಕೊಳ್ಳಲು ಸಮರ್ಥನಾಗುತ್ತಾನೆ. 'ವಿಮರ್ಶಕನ ಶಕ್ತಿ ಇಲ್ಲದ ಕವಿ ಕಾವ್ಯಶಕ್ತಿಯಿಲ್ಲದ ವಿಮರ್ಶಕ ಇಬ್ಬರೂ ಘನತೆಯನ್ನು ಪಡೆಯಲಾರರು'[೩೪] ಕಾವ್ಯ/ಕೃತಿ ರಚನೆಯಾದ ನಂತರ ಅದರ ಮೊದಲ ಓದುಗ ಮತ್ತು ವಿಮರ್ಶಕ ಕರ್ತೃವೇ ಆಗಿರುತ್ತಾನೆ. ಆದರೂ ತನ್ನ ಕೃತಿಯಲ್ಲಿನ ಗುಣದೋಷಗಳನ್ನು ನಿರ್ಲಿಪ್ತವಾಗಿ ಕಾಣಲು ಸಾಧ್ಯವಾಗುವುದಿಲ್ಲ. ಈ ಸಂದರ್ಭದಲ್ಲಿ ವಿಮರ್ಶಕನ ಪಾತ್ರ ಪ್ರಮುಖವಾಗುತ್ತದೆ. ಆದ್ದರಿಂದಲೇ ಒಂದು ಸಾಹಿತ್ಯ ಪರಿಪೂರ್ಣವಾಗಬೇಕಾದರೆ ಸಾಹಿತಿ ಮತ್ತು ವಿಮರ್ಶಕ ಇಬ್ಬರೂ ಮುಖ್ಯ. ಇಲ್ಲಿ ಓದುಗನ ಪಾತ್ರವೇನು?/ಸ್ಥಾನವೇನು? ಕೇವಲ ಈ ಇಬ್ಬರ ಮೂಲಕ ಸಾಹಿತ್ಯ ಪರಿಪೂರ್ಣ ಆಗಬಹುದಾದರೆ ಓದುಗನ ಕೆಲಸವೇನು? 'ವಿಮರ್ಶಕನಿಂದ ಕವಿಯ ಕಾವ್ಯ ಸಹೃದಯದ ಮನಮುಟ್ಟುವಂತಾಗಲೆಬೇಕು. ಕವಿಯ ಓರೆ ಕೋರೆಗಳನ್ನು ಕತ್ತರಿಸಿ ಅದು ಸುಂದರವಾಗುವಂತೆ ಮಾಡುತ್ತಾನೆ. ಈ ಕೆಲಸ ಸಾಹಿತ್ಯ ನಿರ್ಮಿತಿಗೆ ಅಭಿವೃದ್ಧಿಗೆ ಅತ್ಯವಶ್ಯಕ. ಕವಿ ಸೃಷ್ಟಿಗೆ ಮಾನವ ಪ್ರಪಂಚ ಆಧಾರವಾದರೆ ವಿಮರ್ಶಕನ ಸೃಷ್ಟಿಗೆ ಕವಿಸೃಷ್ಟಿ ಆಧಾರ. ಇವೆರಡು ಸೃಷ್ಟಿಗಳು ನೂತನ ಸೃಷ್ಟಿಗೆ ಪೋಷಕವಾಗುತ್ತವೆ. ಆದರೆ ನಮ್ಮ ಸಾಹಿತ್ಯದಲ್ಲಿ ವಿಮರ್ಶೆಯ ಕೊರತೆಯಿದೆ. ಪ್ರಾಚೀನ ಕನ್ನಡದಲ್ಲಿ ವಿಮರ್ಶೆ ಎಂಬುದು ಇತ್ತೇ ಇದ್ದರೆ ವಿಮರ್ಶಕರನ್ನು ಕವಿಗಳು ಹೇಗೆ ಕಾಣುತ್ತಿದ್ದರು ಎಂಬುದು ಸಂಶೋಧನಾ ವಿಷಯವಾಗಿದೆ'.[೩೫] 'ವಿಮರ್ಶೆಯ ಕುರುಹುಗಳು ಬೀಜಗಳು ಅಲ್ಲಲ್ಲಿ ಕಂಡುಬಂದರೂ ಅದು ಒಂದು ಸಾಹಿತ್ಯ ಪ್ರಕಾರವಾಗಿ ಸ್ವತಂತ್ರ ಸ್ಥಾನ ಪಡೆದದ್ದು ೨೦ನೇ ಶತಮಾನದಲ್ಲಿ. ವಿಮರ್ಶೆಯು ಹೊಸಗನ್ನಡ ಸಾಹಿತ್ಯದಲ್ಲಿ ಮೂರು ದೃಷ್ಟಿಗಳಿಂದ ಪ್ರಕಟವಾಗಿರುವುದನ್ನು ಕಾಣಬಹುದು. ಮೊದಲನೆಯದು ಆಧುನಿಕ ಸಾಹಿತ್ಯದ ನವೋದಯ ಕಾಲದಲ್ಲಿ ಪ್ರಾಚೀನ ಕಾವ್ಯಗಳನ್ನು ಬೆಳಕಿಗೆ ತರಬೇಕೆಂಬ ಸದುದ್ದೇಶದಿಂದ ಆ ಕೃತಿಗಳನ್ನು ಪ್ರಕಟಿಸಿ ಅವುಗಳ ಬಗೆಗೆ ವಿಮರ್ಶಾತ್ಮಕವಾದ ಮುನ್ನುಡಿಯನ್ನು ಬರೆಯುವುದು. ಎರಡನೆಯದು ಮಹತ್ವದ ಕವಿಗಳನ್ನು ಕುರಿತು ಪ್ರಶಸ್ತಿ ಗ್ರಂಥಗಳನ್ನು ವಿಮರ್ಶಾ ಗ್ರಂಥಗಳನ್ನು ಪ್ರಕಟಿಸುವುದು. ಮೂರನೆಯದಾಗಿ

ಬೆಳೆಯುತ್ತಿರುವ ಹೊಸ ಸಾಹಿತ್ಯವನ್ನು ಸಮೀಕ್ಷೆ ಮಾಡುವುದು. ಈ ಮೂರು ದಿಸೆಗಳಲ್ಲಿಯೂ ಕಾರ್ಯ ಕನ್ನಡದಲ್ಲಿ ಸ್ವಲ್ಪ ಮಟ್ಟಿಗೆ ನಡೆದಿದೆ.'[೩೬] ಹೀಗೆ ವಿಮರ್ಶೆಯು ತನ್ನ ಕಾರ್ಯಕ್ಷೇತ್ರವನ್ನು ವಿಶಾಲಗೊಳಿಸುತ್ತಾ ಬೆಳೆಯಿತು ಎನ್ನುವುದನ್ನು ಗುರುತಿಸಬಹುದು. ಹೊಸ ಸಾಹಿತ್ಯ ವಿಮರ್ಶೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕಾಗಿದೆ. ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಪ್ರಾಂಜಲ ಮನಸ್ಸಿನ ವಿಮರ್ಶೆಗಿಂತಲೂ ಏಕಪಕ್ಷೀಯತೆಯೇ ಹೆಚ್ಚಾಗಿ ಕಾಣುತ್ತದೆ. ಕೃತಿಯ ಗುಣದೋಷಗಳಿಗಿಂತ ಕೃತಿಕಾರನ ಜಾತಿ, ಮತ, ಪಂಥದ ಕಡೆಗೆ ವಿಶೇಷ ಲಕ್ಷ್ಯ ಹಾಕುತ್ತಿರುವುದು ಆಗಾಗ ಕಂಡುಬರುತ್ತದೆ. ಶುದ್ಧ ವಿಮರ್ಶೆ ಹುಟ್ಟಿದರೆ ಮಾತ್ರ ನಮ್ಮ ಸಾಹಿತ್ಯ ಹೆಚ್ಚು ಶುದ್ಧವಾಗುತ್ತದೆ. 'ಕನ್ನಡದ ಆಚಾರ್ಯರಾದ ಡಿ.ವಿ. ಗುಂಡಪ್ಪನವರು ಎ.ಆರ್.ಕೃ. ಅವರು, ಬಿ.ಎಂ.ಶ್ರೀ. ಅವರು ವಿಮರ್ಶೆಯ ರಾಜಮಾರ್ಗವನ್ನು ನಿರ್ದೇಶಿಸಿದರು. ಅವರ ದಾರಿಯನ್ನೇ ಮುಂದಿನವರು ಅನುಸರಿಸುತ್ತಿದ್ದಾರೆ. ಆದರೂ ವಿಮರ್ಶೆ ಎಷ್ಟು ಬೆಳೆಯಬೇಕೋ ಅಷ್ಟು ಬೆಳೆಯಲಿಲ್ಲ.'[೩೭] ಹಾಗಾದರೆ ಇಲ್ಲಿ ವಿಮರ್ಶೆ ಎಷ್ಟು ಬೆಳೆಯಬೇಕು ಎನ್ನುವಲ್ಲಿ ಅಪೇಕ್ಷೆಯನ್ನುಳ್ಳ ಮನೋಭಾವ ಸ್ಪಷ್ಟವಾಗುತ್ತದೆ. 'ಇದಕ್ಕೆ ಉತ್ತರವಾಗಿ ಇಂದಿನ ಕನ್ನಡದಲ್ಲಿ ನಾವು ಅಪೇಕ್ಷಿಸುವ ವಿಮರ್ಶೆ ಏಳು ತರಹದ್ದು. ಅವು ಯಾವುವೆಂದರೆ

೧. ಇಂದಿನ ವಿಮರ್ಶೆಗೆ ಅಲಂಕಾರ ಶಾಸ್ತ್ರವು ಹಾಗೂ ಪಡುವಣದ ವಿಮರ್ಶೆಯು ಉಗಮ ಸ್ಥಾನಗಳು ಸಂಸ್ಕೃತದಿಂದ ಮತ್ತು ಇಂಗ್ಲೀಷ್‌ನಿಂದ ಇನ್ನಿತರೆ ಭಾಷೆಗಳಿಂದ ಅನುವಾದಿತವಾಗಬೇಕಾಗಿದೆ.

೨. ವ್ಯಾಕರಣ, ಅಲಂಕಾರಶಾಸ್ತ್ರ, ಛಂದಸ್ಸು ಮೊದಲಾದ ವಿಷಯಗಳನ್ನು ಕುರಿತು ಕನ್ನಡದಲ್ಲಾದ ಹಿಂದಿನ ಉದ್ಗ್ರಂಥಗಳನ್ನು ಉತ್ತಮವಾದ ಪೀಠಿಕೆ ಟೀಕೆ, ಟಿಪ್ಪಣಿಗಳೊಂದಿಗೆ ಸಂಪಾದಿಸಿ ಪ್ರಸಿದ್ಧಿಸುವುದು ಇವುಗಳ ಅಭ್ಯಾಸದಿಂದ ಅನೇಕ ಮುಖವಾದ ಕನ್ನಡ ಸಾಹಿತ್ಯದ ಇತಿಹಾಸವನ್ನು ಸುಗಮವಾಗಿ ಬೆಳೆಯಲು ಸಾಧ್ಯವಾಗುತ್ತದೆ. ವಿಶ್ವವಿದ್ಯಾಲಯಗಳು ಆಗೀಗ ಈ ಕೆಲಸವನ್ನು ಪೂರೈಸುತ್ತಾ ಬಂದಿವೆ.

೩. ಇಂದಿನ ಕನ್ನಡದ ಭಾಷಾಶಾಸ್ತ್ರ ವ್ಯಾಕರಣ, ಛಂದಸ್ಸು ಇವುಗಳ ವಿವರಣೆ ಅತ್ಯಗತ್ಯ

೪. ಕನ್ನಡದ ಸಾಹಿತ್ಯೇತಿಹಾಸ

ಒಂದೊಂದು ವಿಶಿಷ್ಟ ಯುಗದ ಸಾಹಿತ್ಯೇತಿಹಾಸದ ಮೇಲೆ ವಿವರಪೂರ್ಣ ಗ್ರಂಥಗಳು ಬೇಕಾಗಿವೆ. ಒಂದೊಂದು ಮಹಾಕಾವ್ಯದ ರಸಾಸ್ವಾದನ ಕೃತಿಯಾಗಿ ಬರಬೇಕು. ಇದಲ್ಲದೇ ಆಯಾ ಕಾಲದ ರಾಜಕೀಯ ಸಾಮಾಜಿಕ ಚಾರಿತ್ರಿಕ ಜೀವನಚಿತ್ರದೊಡನೆ ಸಾಹಿತ್ಯೇತಿಹಾಸವನ್ನು ಹೆಣೆದು ಆ ಹಿನ್ನೆಲೆಯಲ್ಲಿ ಸಾಹಿತ್ಯೇತಿಹಾಸವನ್ನು ಅರ್ಥಪೂರ್ಣವಾಗಿ ತೋರಿಸುವ ಗ್ರಂಥಗಳು ಬೇಕು. ಭಾಷೆಯ ವಿಕಾಸ, ಶೈಲಿಯಲ್ಲಿಯ ಭಿನ್ನರುಚಿ, ಛಂದಸ್ಸಿನಲ್ಲಿರುವ ಮಾರ್ಪಾಟು ಇವುಗಳಲ್ಲಾದ ಕ್ರಾಂತಿಗಳನ್ನು ಸಕಾರಣವಾಗಿ ಸಮರ್ಥಿಸಿ ತೋರಿಸುವ ವಿಮರ್ಶಾ ಗ್ರಂಥಗಳು ಬೇಕು.

ಸಮಕಾಲೀನ ಸಾಹಿತ್ಯವನ್ನು ಕುರಿತು ಪ್ರತಿಭಾವಂತ ವಿಮರ್ಶೆ ಹಾಗೂ ಸಿಂಹಾವಲೋಕನ ಬೇಕು. ಒಂದು ದೃಷ್ಟಿಯಿಂದ ಸಮಕಾಲೀನ ವಿಮರ್ಶೆ ಅತಿ ಕಠಿಣವಾದ ಕಾರ್ಯ. ಇಲ್ಲಿ ಪಾಲಿಸಬೇಕಾದ ಎರಡು ಮಾತುಗಳಿವೆ. ಒಂದು ಮೌಲ್ಯಮಾಪನ ಸಮಕಾಲೀನ ಸಾಹಿತ್ಯದ ವಿಷಯದಲ್ಲಿ ಸುಲಭವಲ್ಲ. ಹಟದಿಂದ ಈ ದಾರಿಯಲ್ಲಿ ಮುನ್ನಡೆದರೆ ತಪ್ಪು ತಿಳುವಳಿಕೆಯಿಂದ ಸಾಹಿತ್ಯಕ ವಾತಾವರಣ ಕದಡುತ್ತದೆ. ಸಾಹಿತಿಗಳ ನಡುವೆ ಸೌಹಾರ್ದವಿದ್ದಷ್ಟು ಕ್ಷೇಮಕರ. ಸ್ನೇಹಕರ. ಸ್ನೇಹದ ವಾತಾವರಣದಲ್ಲಿ ಸಾಹಿತ್ಯವು

ಹೆಚ್ಚು ಸುಗಮವಾಗಿ ಬೆಳೆಯಬಲ್ಲದು. ವಿಮರ್ಶೆಯನ್ನು ಸಂಯಮದಿಂದ ಸಾಹಿತ್ಯದ ವಾತಾವರಣಕ್ಕೆ ಯಾವುದೇ ಹಾನಿಯಾಗದಂತೆ ನಿರ್ವಹಿಸಬೇಕು.

೬. ವಿಮರ್ಶೆಯ ವಿವಿಧ ತಾತ್ವಿಕ ದೃಷ್ಟಿಗಳನ್ನು ಸಮನ್ವಯಿಸುವ ಕಾರ್ಯ ಮೂಡಣ–ಪಡುವಣಗಳ ದೃಷ್ಟಿ ಸಮನ್ವಯ ದಾರಿಯಲ್ಲಾದ ಪ್ರಯತ್ನಗಳನ್ನು ನಮ್ಮ ಇಂದಿನ ಅನೇಕ ಕವಿಗಳಿಂದ ಬಂದ ವಿಮರ್ಶೆಯಲ್ಲಿ ಕಾಣಬಹುದು. ಉದ್ಗ್ರಂಥಗಳ ರೂಪ ತಾಳಿ ಈ ನವೀನ ವಿಮರ್ಶೆ ಬರಬೇಕಾಗಿದೆ.

೭. ವಿಮರ್ಶೆಯ ಸ್ವಯಂ ಪರೀಕ್ಷೆ ಹಾಗೂ ನಾಳಿನ ಸಾಹಿತ್ಯ ವಿಕಾಸಕ್ಕಾಗಿ ಅನುಕೂಲವಾದ ಬೌದ್ಧಿಕ ವಾತಾವರಣದ ನಿರ್ಮಾಣ ವಿಮರ್ಶಾ ತತ್ವಗಳ ಮನನ ಹಾಗೂ ಪರೀಕ್ಷಣ ಅತ್ಯಗತ್ಯ. ಮಾನವಿಕ ಶಾಸ್ತ್ರಗಳ ಮೂಲಕ ಸಾಹಿತ್ಯವನ್ನು ನೋಡುವ ಕ್ರಮ ಬೆಳೆಯಬೇಕು. ಯುಗ ವಿಶೇಷದಿಂದ ಪ್ರಚಲಿತವಾದ ಜೀವನ ದೃಷ್ಟಿಗಳ ಗುಣಾವಗುಣಗಳನ್ನು ಬಿಡಿಸಿ ತೋರಿಸಬೇಕಾಗುತ್ತದೆ. ಇಂತಹ ಚರ್ಚೆಯಿಂದ ಉದಯೋನ್ಮುಖ ಸಾಹಿತಿಯ ಪ್ರತಿಭೆ ಉದ್ದೀಪನಗೊಳ್ಳುತ್ತದೆ.[೩೮]

ಈ ರೀತಿಯ ಅಪೇಕ್ಷೆಗಳನ್ನು ಪೂರೈಸುವ ವಿಮರ್ಶೆಯು ಬೆಳೆಯಬೇಕಾಗಿದೆ. ಇಂದಿನ ಆಧುನಿಕೋತ್ತರ ವಿಮರ್ಶೆಯು ಇಲ್ಲಿನ ಕೆಲವು ಅಂಶಗಳನ್ನು ಗಮನಿಸಬಹುದಾಗಿದೆ. 'ಈ ವಿಮರ್ಶೆಯಿಂದ ಹೊಚ್ಚ ಹೊಸ ಬರಹಗಾರರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಲಿಕ್ಕೆ ಹೊಸ ಬರವಣಿಗೆಯಲ್ಲಿ ಮೂಡಿರುವ ಅನಿಷ್ಟಗಳನ್ನು ತಡೆಯುವುದಕ್ಕೂ ಓದುಗರ ಅಭಿರುಚಿಯನ್ನು ಸಂಸ್ಕರಿಸಲಿಕ್ಕೂ ಪ್ರಬಲ ಸಾಧನವಾಗಿದೆ. ವಾಚಕ ವರ್ಗದಲ್ಲಿ ಅವ್ಯಕ್ತವಾಗಿಯೇ ಇರುವ ಈ ವಿಮರ್ಶೆ ಕಾಲಾನುಕ್ರಮದಿಂದ ಒಂದು ಕಲೆಯಾಗಿ ಶಾಸ್ತ್ರವಾಗಿ ಪ್ರತ್ಯೇಕ ವ್ಯವಸಾಯವಾಗಿ ಪರಿಣಮಿಸಿದೆ. ದಿನಪತ್ರಿಕೆ, ಮಾಸಪತ್ರಿಕೆಗಳಲ್ಲಿ ಆಗಾಗ ವಿಮರ್ಶೆಗಳನ್ನು ಪ್ರಕಟಿಸುತ್ತಿರಬೇಕು. ನಮ್ಮ ವಿಮರ್ಶನ ಪದ್ಧತಿಯಲ್ಲಿ ರಸ ಹಾಗೂ ಧ್ವನಿ ಇವುಗಳಿಗೆ ಉಚ್ಚ ಸ್ಥಾನವಿದೆ. ಇದು ಪಾಶ್ಚಾತ್ಯರಿಗೆ ಹೊಸದು. ಪಾಶ್ಚಾತ್ಯ ಪದ್ಧತಿಯಲ್ಲಿ ತಕ್ಕ ಸಾಹಿತ್ಯ ಪ್ರಕಾರದಿಂದ ವಿಷಯಕ್ಕೆ ಸಾರ್ಥಕತೆಯುಂಟಾಗುತ್ತದೆಂಬೊಂದು ತತ್ವವಿದೆ. ಇದು ನಮ್ಮವರಿಗೆ ಹೊಸದು. ಈ ಕಾರ್ಯದಲ್ಲಿ ಪಾಶ್ಚಾತ್ಯ – ಪೌರಾತ್ಯ ಈ ಎರಡು ಪದ್ಧತಿಗಳಲ್ಲಿಯೂ ನುರಿತವರಾದ ಕನ್ನಡ ಪ್ರಾಧ್ಯಾಪಕರು ಇನ್ನಿತರ ಪಂಡಿತರೂ ಸಹಕರಿಸಿದರೆ ಕನ್ನಡದಲ್ಲಿಯೂ ಒಳ್ಳೆಯ ವಿಮರ್ಶೆ ಹುಟ್ಟಬಹುದೆಂಬ ಆಶೆ ಇದೆ'.[೩೯] ಈ ರೀತಿಯಾಗಿ ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ತನ್ನ ಸ್ಥಾನವನ್ನು ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತಾರಗೊಳಿಸಬೇಕಾಗಿದೆ. ಅದಕ್ಕೆ ಅಧ್ಯಕ್ಷರು ನೀಡಿದ ಸಲಹೆಸೂಚನೆಗಳನ್ನು ಅಳವಡಿಸಿಕೊಳ್ಳಬಹುದು.

**೪. ಹಿಂದಿನ ಸಾಹಿತ್ಯ ಮತ್ತು ಇಂದಿನ ಸಾಹಿತ್ಯ**

ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರುಗಳು ಬಹುತೇಕ ಕಡೆ ಹಿಂದಿನ ಸಾಹಿತ್ಯ ಮತ್ತು ಇಂದಿನ ಸಾಹಿತ್ಯಗಳ ಬಗ್ಗೆ ಚರ್ಚೆಯನ್ನು ನಡೆಸಿದ್ದಾರೆ. ಈ ಸಂದರ್ಭದಲ್ಲಿ ಹಿಂದಿನ ಸಾಹಿತ್ಯದ ಬಗ್ಗೆ ಅವರ ನಿಲುವುಗಳೇನಾಗಿದ್ದವು ಎನ್ನುವುದನ್ನು ಅವರ ಮಾತುಗಳಲ್ಲಿಯೇ ನೋಡಬಹುದಾಗಿದೆ. 'ಕನ್ನಡದ ಚರಿತ್ರೆಯನ್ನು ನೋಡಿದರೆ ಕನ್ನಡ ನಾಡಿನ ವೈಶಿಷ್ಟ್ಯದ ಚಿತ್ರವು ಕಣ್ಣಿಗೆ ಕಟ್ಟಿದಂತಾಗುವುದು. ಕನ್ನಡದ ವರ್ತಕರು ಕಡಲ ವಿಹಾರವನ್ನು ಮಾಡಿ ನಾಡಿನ ಸಿರಿಯನ್ನು ಬೆಳೆಸಿದ್ದರು.'[೪೦] ಹೀಗೆ ಕನ್ನಡದ ಶ್ರೇಷ್ಠತೆಯನ್ನು ನಾಡಿನ ಚರಿತ್ರೆಯಲ್ಲಿಯೇ ಕಾಣುತ್ತಿದ್ದರು ಇನ್ನು ಸಾಹಿತ್ಯದ ವಿಷಯವಾಗಿ ಕಾವ್ಯಗಳ ಗ್ರಂಥಾರಾಧನೆಗೆ

ಸಾಹಿತ್ಯ' ಎಂದು ಕರೆಯುತ್ತಿದ್ದರು. ಪ್ರಾಚೀನ ಲಾಕ್ಷಣಿಕರು ಗ್ರಂಥ ರಾಶಿಯನ್ನು ಸಾಮಾನ್ಯವಾಗಿ ಕಾವ್ಯವೆಂತಲೂ' ಇದು ರಸಾತ್ಮಕವಾಗಿದ್ದು ಇದು ಜನಸಾಮಾನ್ಯಕ್ಕೂ ಚಿತ್ತಾನಂದವನ್ನುಂಟು ಮಾಡುವುದು. ಈ ಕಾವ್ಯ ಸಮೂದಾಯವೇ ಕಾವ್ಯ. ವೇದಾಗಮಾದಿ ಗ್ರಂಥಗಳು 'ಶಾಸ್ತ್ರ' ಎನ್ನುವ ಪಂಗಡಕ್ಕೆ ಸೇರುವಂತವುಗಳು. ಇವುಗಳಿಂದ ಉಂಟಾಗುವ ಆನಂದ ಹೃದಯಕ್ಕಲ್ಲಾ ಬುದ್ದಿಗೆ. ಪ್ರಾಚೀನರು ಸಾಹಿತ್ಯವನ್ನು ಮೂರು ಪ್ರಕಾರಗಳಲ್ಲಿ ವಿಂಗಡಿಸಿದ್ದಾರೆ. ಒಂದು ಪ್ರಭು ಸಮ್ಮಿತ, ಮಿತ್ರ ಸಮ್ಮಿತ, ಕಾಂತಾ ಸಮ್ಮಿತ. ಹೀಗೆ ಸಾಹಿತ್ಯವು ಈ ಮೂರು ಪ್ರಕಾರಗಳಲ್ಲಿ ತನ್ನ ಕಾರ್ಯವನ್ನು ನಿರ್ವಹಿಸುತ್ತಿತ್ತು. ಆಧುನಿಕರಲ್ಲಿ ಕೆಲವರು ಭಾಷೆಯೆ ಸಾಹಿತ್ಯವೆಂತಲೂ ಕೆಲವರು ಎಲ್ಲಾ ವಿಧದ ಗ್ರಂಥಗಳು ಸಾಹಿತ್ಯ ಪದ ವಾಚ್ಯಗಳೇ ಕಾವ್ಯ ನಾಟಕಗಳು ಸಾಹಿತ್ಯದಲ್ಲಿ ಪ್ರಧಾನವಾದವುಗಳೆಂದು ಹೇಳಬಹುದೆಂದು ತರ್ಕಿಸುವರು.[೪೧] ಪ್ರಾಚೀನರ ಕಾಲಧೋರಣೆಯೆ ಬೇರೆ ರೀತಿಯದ್ದಾಗಿತ್ತು. ಪ್ರಾಚೀನರಲ್ಲಿ ಕಾವ್ಯ ಅಲಂಕಾರಗಳೇ ಪ್ರಧಾನವೆಂದು ಹೇಳುತ್ತಿದ್ದರು. ದಂಡಿ, ಬಾಮಹ, ಉದ್ದಟ, ರುದ್ರಟ ಇತ್ಯಾದಿ ಎಲ್ಲಾ ಲಾಕ್ಷಣಿಕರ ಸಿದ್ಧಾಂತಗಳು ಸಂಸ್ಕೃತದ ಸಾಹಿತ್ಯ ಮೀಮಾಂಸೆಯನ್ನೆ ಪ್ರತಿಪಾದಿಸುತ್ತವೆಯೆ ಹೊರತು ಕನ್ನಡದ ಸಾಹಿತ್ಯ ಮೀಮಾಂಸೆಯನ್ನಲ್ಲ. ಆಧುನಿಕ ಲಾಕ್ಷಣಿಕರು ಧ್ವನಿ ಸಂಪ್ರದಾಯವೇ ಕಾವ್ಯಕ್ಕೆ/ಸಾಹಿತ್ಯಕ್ಕೆ ಪ್ರಧಾನವೆಂದು ವಾದಿಸುವವರಾಗಿದ್ದಾರೆ.

ಮಮ್ಮಟ, ಅಪ್ಪಯ್ಯ ದಿಕ್ಷೀತ ಪಂಡಿತ ಜಗನ್ನಾಥ ಮೊದಲಾದವರು ಆಧುನಿಕ ಲಾಕ್ಷಣಿಕರು ಕಾವ್ಯವನ್ನು ಅರ್ಥೈಸಲು ಹೊರಟಿದ್ದಾರೆ. ಹೀಗೆ 'ಪ್ರಾಚೀನ ಅಲಂಕಾರಿಕರಿಂದ ಅಲಂಕಾರಗಳಿಗೆ ಕೊಟ್ಟ ಗೌರವವೆಲ್ಲವು ಆಧುನಿಕರಿಂದ ತಗ್ಗಿಸಲ್ಪಟ್ಟಿದೆ. ಆಧುನಿಕ ಮತದಲ್ಲಿ ಅಲಂಕಾರವಿದ್ದರೂ ಇಲ್ಲದಿದ್ದರೂ ರಸವು ಹುಟ್ಟಬಹುದು'.[೪೨] ಎಂದು ವಾದಿಸುತ್ತಾರೆ. ಈ ಎಲ್ಲರು ಸಂಸ್ಕೃತದ ಲಾಕ್ಷಣಿಕರು ಇನ್ನು ಕನ್ನಡದ ಲಾಕ್ಷಣಿಕರು ಎಂದು ಹೇಳುತ್ತಾರೆ ಎಂಬುದನ್ನು ಗಮನಿಸಬಹುದು. ಕನ್ನಡದ ಲಾಕ್ಷಣಿಕರಲ್ಲಿ ನೃಪತುಂಗನೆ ಮೊದಲ ಲಾಕ್ಷಣಿಕ ಎಂದು ಗುರುತಿಸಬಹುದು. 'ಕವಿರಾಜಮಾರ್ಗವು ಬಹುಮಟ್ಟಿಗೆ ದಂಡಿಯ ಕಾವ್ಯ ದರ್ಶನವಾಗಿದೆ. ಇದೆ ಜಾಡಿನಲ್ಲಿ ನಾಗವರ್ಮ ಉದಯಾದಿತ್ಯ ಕವಿ, ಕಾಮ, ಮಾಧವ, ಸಾಳ್ವ, ತಿಮ್ಮ, ತಿರುಮಲಾರ್ಯ ಲಿಂಗರಾಜ ಇವರೆಲ್ಲರೂ ಸಂಸ್ಕೃತದ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಅನುವಾದ ಮಾಡುವ ಕೆಲಸವನ್ನೇ ಮಾಡಿದ್ದಾರೆ. ಸಂಸ್ಕೃತದ ಲಾಕ್ಷಣಿಕರು ಏನು ಹೇಳಿದ್ದಾರೆಯೊ ಅದನ್ನೇ ಹೇಳುವ ಪ್ರಯತ್ನವನ್ನು ಮಾಡಿದ್ದಾರೆ. ಕನ್ನಡದ ಇಂದಿನ ಆಧುನಿಕ ಸಾಹಿತ್ಯ ಭಕ್ತರು ಸಹ ಸಂಸ್ಕೃತದ ಕಾವ್ಯ ಲಕ್ಷಣವನ್ನೆ ಹೇಳುವವರಿದ್ದಾರೆ. ಮತ್ತೆ ಕೆಲವರು ಕಾವ್ಯವೆಂದರೆ 'ಜನಜೀವನದ ವಿಮರ್ಶೆ ಅದು ಹೃದಯದಲ್ಲಿ ಜನಿಸುವ ಭಾವಗಳಿಗೆ ರೂಪಗೊಡುವ ಉತ್ತಮ ಸಾಹಿತ್ಯ ಜನಜೀವನ ವಾಣಿ ಎಂದು ಕಾವ್ಯ ಸ್ವರೂಪವನ್ನೆ ಪ್ರತಿಪಾದಿಸಿದ್ದಾರೆ. ಇದಲ್ಲದೆ ಇಂಗ್ಲೀಷ್ ಸಾಹಿತ್ಯದಲ್ಲಿರುವ 'ಭಾವಕಲ್ಪನೆಗಳ ಭಾಷೆಯೇ ಪದ್ಯಕಾವ್ಯವು'[೪೩] ಎಂದು ಕನ್ನಡ ಇಂಗ್ಲೀಷ್ ಪದ್ಯ ಕಾವ್ಯಗಳೆರಡರ ಕಾವ್ಯ ಸ್ವರೂಪಗಳನ್ನು ವಿಮರ್ಶಿಸಿ ಅವುಗಳೆಲ್ಲವುಗಳನ್ನು ಸಮನ್ವಯಗೊಳಿಸುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ಕನ್ನಡವು ಸಮ್ಮಿಶ್ರಿತ ಭಾಷೆಯಾಗಿದೆ. ಎಲ್ಲಾ ಭಾಷೆಗಳು ವಿಶ್ವಪ್ರಕೃತಿಯವು. ಅವುಗಳಲ್ಲಿ ತನಗೆ ಬೇಕಾದ ಸಾಮಗ್ರಿ ಯಾವುದರಲ್ಲಿದ್ದರೂ ಅದನ್ನು ಆರಿಸಿಕೊಳ್ಳುವ ಅಧಿಕಾರವು ಪ್ರತಿಯೊಂದು ಭಾಷೆಗೂ ಉಂಟು. ಹಾಗೆ ಮಾಡದ ಭಾಷೆಯು ಜೀವಂತವಾಗಿ ಬೆಳೆಯಲಾರದು'.[೪೪] ಕನ್ನಡವು ಹಲವು ಭಾಷೆಗಳಿಂದ ಹಲವಾರು ಗುಣಗಳನ್ನು ಪಡೆದು ಪುಷ್ಟವಾಗುತ್ತದೆ.

ತನ್ನದೆ ಆದ ಭಾಷಿಕ ರಚನೆಯಲ್ಲಿ ಅದು ತೊಡಗಿದೆ. ಆದ್ದರಿಂದ ಅನ್ಯ ಸಾಹಿತ್ಯ ಸಂಪರ್ಕದಿಂದ ಪ್ರಯೋಜನವಿದೆ ಎಂದು ಈಗ ಎಲ್ಲರು ಒಪ್ಪಬಹುದಾಗಿದೆ.

ಇಂದಿನ ಸಾಹಿತ್ಯವು ಇತ್ತೀಚೆಗೆ ಸ್ಥಾಪಿಸಲ್ಪಟ್ಟ ಸಂಘ–ಸಂಸ್ಥೆಗಳ ಮೂಲಕ ಮತ್ತು ಅವುಗಳ ಪ್ರಭಾವ ಪ್ರೇರಣೆಯಿಂದಲೂ ಹೊಸ ರೀತಿಯ ಗ್ರಂಥಗಳನ್ನು ರಚಿಸಲು ಕಾರಣವಾಗಿದೆ. ಆಧುನಿಕ ಸಾಹಿತಿಗಳು ಸಾಹಿತ್ಯದ ಬಗ್ಗೆ ಹೊಸ ನಿಲುವುಗಳನ್ನೇ ತಾಳಲು ಹೊರಟಿದ್ದಾರೆ. 'ನಮ್ಮ ಸಾಹಿತ್ಯವು ಮುಂದುವರೆಯಬೇಕಾದರೆ ಅದು ಕೃತಕ ನಿಯಮಗಳ ನಿರ್ಬಂಧದಿಂದ ಬಿಡಿಸಿಕೊಂಡು ಸ್ವತಂತ್ರವಾಗಿ ನಡೆಯಬೇಕು'.[೪೫] ಇಂತಹುದೆ ಒಂದು ವಾದವನ್ನು ಬಿ.ಎಂ.ಶ್ರೀ.ಯವರ ಭಾಷಣದಲ್ಲಿಯೂ ಕಾಣಬಹುದು. ಇದುವರೆಗಿನ ಸಾಹಿತ್ಯವು ಚರ್ವಿತಚರ್ವಣವಾಗಿದೆ. ಅವು 'ಸಂಸ್ಕೃತ ಶಬ್ದದಿಂದ ಹೆಣೆದುಕೊಂಡಿರುವ ನೇಯ್ಗೆಯ ಮಂತ್ರದಂತಿದೆ' ಶೈಲಿಯು ಸಾಧಾರಣವಾಗಿ ಕೃತಕ ನೀರಸ. ಇನ್ನೂ ರೆಕ್ಕೆ ಬಲಿಯದೆ ಕುಪ್ಪಳಿಸುವ ಹಕ್ಕಿಯ ಮರಿಯ ಹಾಗೇ. ಮಾನವನ ವಿಶಾಲ ಮನೋವೃತ್ತಿಗಳನ್ನು ಛಾಯೆಯಂತೆ ಅನುಸರಿಸುವ ಪ್ರತಿಭಾವಿಷ್ಟವಾದ ಉದಾತ್ತವಾದ ವಾಣಿಯಲ್ಲ. ಶಾಸ್ತ್ರ ಶಿಕ್ಷೆಯನ್ನು ಪಡೆದಿರಬಹುದು. ಆಡಂಬರವಿರಬಹುದು. ಚಮತ್ಕಾರ ಚೇಷ್ಟ, ಒಲವು, ವೈಯಾರ ಎಲ್ಲಾ ಇರಬಹುದು. ಆದರೆ ಎಲ್ಲಾ ಪಾಮರ ರಂಜನೆ ಒಂದು ಬಗೆಯ ಪಂಡಿತರಿಗೆ ಮಾತ್ರ, ರಂಜನೆ ಕಥೆ ವ್ಯಕ್ತಿಗಳನ್ನು ಚಿತ್ರಿಸಿರುವುದು ರಸಭಾವ, ವರ್ಣನೆ, ಎಲ್ಲವು ಹರಿದ ಕಾಲುವೆಯಲ್ಲಿ ಪಾಚಿಗಟ್ಟಿ ಹರಿಯುವ ನೀರು ವಿಷಯವೋ ವೈರಾಗ್ಯದಲ್ಲಿ ಮತ್ತು ವೈರಾಗ್ಯ ಹುಟ್ಟಿದಾಗ ಶೃಂಗಾರ ಎಂತಹ ಶೃಂಗಾರ! ಭಕ್ತಿ ಜ್ಞಾನ, ಧರ್ಮ, ನೀತಿ, ಮಾನವ ಪ್ರಪಂಚ ಪ್ರಕೃತಿ ಇವೆಲ್ಲಾ ಉತ್ತಮ ಕವಿತ ವಿಷಯಗಳೆ ಹೌದು. ಆದರೆ ಹೇಳುವ ರೀತಿ ರಸಪುಷ್ಟಿ. ಆದ್ದರಿಂದ 'ಸಾಹಿತ್ಯವು ಬದಲಾಗಬೇಕೆಂದು ಬಯಸುತ್ತಿದ್ದಾರೆ. ಮನುಷ್ಯ ಜಾತಿ ನಾನಾ ಅನುಭವಗಳು ನಮ್ಮ ಪೂರ್ವದ ಸಾಹಿತ್ಯದಲ್ಲಿ ಎಷ್ಟರ ಮಟ್ಟಿಗೆ ಸಿಕ್ಕಬಹುದು ಶುದ್ಧ ಕಲಾ ದೃಷ್ಟಿಯಿಂದ ಸಾಹಿತ್ಯ ಕಾವ್ಯ ಎನಿಸಿಕೊಳ್ಳಬಹುದಾದ ಬರವಣಿಗೆ ನಮ್ಮ ಪೂರ್ವದ ಸಾಹಿತ್ಯದಲ್ಲಿ ಹೇರಳವಾಗಿದೆ ಎಂದು ಎಷ್ಟರಮಟ್ಟಿಗೆ ಧೈರ್ಯವಾಗಿ ಹೇಳಬಹುದು?'[೪೬] ಇಲ್ಲಿ ಬದಲಾವಣೆಯ ಅಪೇಕ್ಷೆ ಸ್ಪಷ್ಟವಾಗಿ ಇವರ ಮಾತುಗಳಲ್ಲಿ ಗಮನಿಸಬಹುದು. ಹಾಗೆಂದು ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಹುರುಳಿಲ್ಲವೆಂದು ಹೇಳುತ್ತಿಲ್ಲ. ಕೆಲವು ಅದ್ಭುತವಾದ ಸ್ಥಾಯಿ ಭಾವವುಳ್ಳ ರಸವತ್ತಾದ ಕೃತಿಗಳಿಂದ ಹಳೆಯ ಸಾಹಿತ್ಯವು ಶ್ರೀಮಂತವಾಗಿದೆ. ಆದರೆ ಅದೇ ಮುಂದುವರೆದುಕೊಂಡು ಹೋಗುವುದರಲ್ಲಿ ಯಾವ ಅರ್ಥವು ಇಲ್ಲ. ಆಧುನಿಕತೆಗೆ ತಕ್ಕಂತೆ ಬದಲಾಗಬೇಕು ಎನ್ನುವುದನ್ನು ಇವರ ಆ ಮಾತುಗಳಲ್ಲಿ ಗುರುತಿಸಬಹುದು.

ಇಲ್ಲಿ ಇನ್ನೊಂದು ಅಭಿಪ್ರಾಯವನ್ನು ಗಮನಿಸಬಹುದು. 'ಪ್ರಾಚೀನ ಕನ್ನಡ ಸಾಹಿತ್ಯದ ಬರವಣಿಗೆ ಸಿಕ್ಕಿರುವುದು ಅಲ್ಪ ಪ್ರಮಾಣ. ಅದರಲ್ಲಿಯೂ ವಿಶೇಷವಾಗಿ ರಾಜರನ್ನು ಕುರಿತದ್ದು. ರಾಜರಿಗಾಗಿ ಕೆಲವು ಮಹಾರಾಜರಿಗಾಗಿ ಬರೆದುದು. ಇದರಿಂದ ಬೇರೆ ರೀತಿಯ ವರ್ಣನೆಗಳು ಇಲ್ಲದೇ ಹೋಯಿತು. ಹಿಂದೆ ನಮ್ಮ ಸಾಹಿತ್ಯವು ಸಮುದ್ರಕ್ಕೆ ಸಂಬಂಧವಿಲ್ಲದೆ ಇದ್ದ ಸರೋವರದಂತೆ ಇತ್ತು. ಅದರಲ್ಲಿ ಶಾಂತಿ ಇತ್ತು. ಆದರೆ ನೀರು ಕೊಳೆಯಾಗುತ್ತಾ ಬಂದಿತ್ತು. ಈಗ ಅದು ವಿಶಾಲ ಪ್ರಪಂಚದೊಂದಿಗೆ ಸಂಬಂಧವನ್ನು ಪಡೆದಿದೆ'.[೪೭] ಆದ್ದರಿಂದ ಕನ್ನಡಕ್ಕೆ ಹೊಸದಾದ ಸಾಹಿತ್ಯ ಶಾಸ್ತ್ರದ ಅವಶ್ಯಕತೆ ಇದೆ. ಕವಿಯ ಕರ್ಮದ

ಸ್ವರೂಪಕ್ಕೆ ಪ್ರಾಶಸ್ತ್ಯ ಕೊಟ್ಟು ನಿಯಮಗಳನ್ನು ಮುಂದಿಟ್ಟು ಇತ್ತೀಚಿನ ನಮ್ಮ ಕಾವ್ಯ ಮೀಮಾಂಸೆಯನ್ನು ಒಬ್ಬೊಬ್ಬ ಕವಿಯ ಅಂತರಂಗಕ್ಕೆ ಪ್ರಾಶಸ್ತ್ಯವನ್ನು ಕೊಟ್ಟು ನಿಯಮವೇ ಇಲ್ಲ ಎನ್ನುವ ಪಾಶ್ಚಾತ್ಯರ ಜೀವನ ತತ್ವಗಳನ್ನು ದೈವಿಕ ಎನ್ನುವುದರ ಮೇಲೆ ಹೆಚ್ಚು ಭಾರ ಹಾಕುವ ನಮ್ಮವರ ಜೀವನ ತತ್ವವನ್ನು ಸಮನ್ವಯ ಮಾಡಿ ಒಂದು ಜೀವನ ತತ್ವವನ್ನು ನಿರ್ಧರಿಸಿಕೊಂಡು ಅದಕ್ಕೆ ಅನುಸಾರವಾದ ಸಾಹಿತ್ಯವನ್ನು ಸಾಹಿತ್ಯ ಶಾಸ್ತ್ರವನ್ನು ನಾವು ತರಬೇಕಾಗಿದೆ. ಋಷಿಯಾದವನು ಮಾತ್ರವಲ್ಲ. ಋಷಿಯಾಗಲು ಯತ್ನಿಸುತ್ತಿರುವವನು ಸುಖದ ಸ್ವರೂಪವನ್ನು ಕಂಡು ತಿಳಿದು ತನ್ನ ಅನುಭವವನ್ನು ಹೇಳಿದರೆ ಕಾವ್ಯವಾಗುತ್ತದೆ. ನಮ್ಮ ಹೊಸ ಸಾಹಿತ್ಯ ಶಾಸ್ತ್ರದಲ್ಲಿ ಈ ಸೂತ್ರಕ್ಕೆ ಸ್ಥಾನ ದೊರೆಯಬೇಕು'.[೪೮] ಹಲವಾರು ದಾಳಿಗಳು ಆಕ್ರಮಣಗಳು ಆಡಳಿತಗಳ ತರುವಾಯ ಕನ್ನಡ ನಾಡು ಒಟ್ಟಾಗುವ ಕಾಲ ಮತ್ತೆ ಬರುತ್ತಿರುವ ಸಂದರ್ಭದಲ್ಲಿ ಕರ್ನಾಟಕ ಸಾಹಿತ್ಯ ಪ್ರಪಂಚದಲ್ಲಿ ಕ್ರಾಂತಿಯ ಕಾಲವೆಂದು ಹೇಳಬಹುದು'.[೪೯] ೧೫-೨೦ ವರ್ಷಗಳಿಂದ ಹೊಸ ಸಾಹಿತ್ಯದಲ್ಲಿ ಕತೆ, ಕಾದಂಬರಿ, ನಾಟಕ, ಚರಿತ್ರೆ, ಇಂಗ್ಲೀಷ್‌ನ ಪ್ರಸಿದ್ಧ ಗ್ರಂಥಗಳ ಅನುವಾದ ಮುಖ್ಯವಾಗಿದೆ. ಇಂತಹ ಸಂದರ್ಭದಲ್ಲಿ ಹಳೆಯ ಸಾಹಿತ್ಯಕ್ಕೆ ಹೊಸ ಸಾಹಿತ್ಯಕ್ಕೆ ಘರ್ಷಣೆ ನಡೆಯುತ್ತಲೇ ಇರುತ್ತದೆ. (ಬಹುಶಃ ಘರ್ಷಣೆಗಳಿಂದಲೂ ಬದಲಾವಣೆ ಸಾಧ್ಯ) ಜನರ ನಡೆ, ನುಡಿ, ಆಚಾರ, ವಿಚಾರ, ಆಲೋಚನಾ ಕ್ರಮಗಳಲ್ಲಿ ಬದಲಾವಣೆಯಾದಂತೆ ಸಾಹಿತ್ಯದಲ್ಲಿಯೂ ಬದಲಾವಣೆಯನ್ನು ಕಾಣಬಹುದು. ಇಂಗ್ಲೀಷ್ ಭಾಷೆಯ ಪ್ರಭಾವ ಇದಕ್ಕೆ ಕಾರಣವಾಗಿದೆ. 'ಮೊದಲಿನ ನಮ್ಮ ಸಾಹಿತ್ಯ ರತ್ನ ಭಂಡಾಗಾರದಂತಿರುತ್ತದೆ. ಈಗಿನ ಸಾಹಿತ್ಯ ನಾಣ್ಯದಂತಿರುತ್ತದೆ'.[೫೦]

ಈಗಿನ ಕಾಲದ ನಮ್ಮ ಸಾಹಿತ್ಯವು ರಾಷ್ಟ್ರೀಯ ಭಾವನೆಯಿಂದ ತುಂಬಿರಬೇಕು. ವಿಶ್ವಜ್ಞಾನ ಕೋಶವಾಗಬೇಕು. ಆಗ ಮಾತ್ರ ಅದರಿಂದ ಉಪಯೋಗ. ನಮ್ಮ ತರುಣದಲ್ಲಿ ಪ್ರಪಂಚ ಜಾಗೃತಿಯಾಗಿ ಕರ್ನಾಟಕದ ಕಲ್ಪನೆ ಅವರಿಗೆ ಪ್ರತಿಬಿಂಬಿಸುವಂತೆ ಆಗಬೇಕು. (ಅದೇ ಪುಟ) ಇಲ್ಲಿ ಏಕೀಕರಣದ ಸ್ವಾತಂತ್ರ್ಯದ ಮೂಲಕ ಸಾಹಿತ್ಯ ರಚನೆಯಾಗಬೇಕು ಎನ್ನುವ ಅಂಶವನ್ನು ಕಾಣಬಹುದು. ಈ ಹಿಂದೆ ಸಂಸ್ಕೃತ ಪಾಂಡಿತ್ಯದ ಹೊರೆಯಿಂದಾಗಿ ದೇಶೀಯ ಭಾಷೆಗಳಲ್ಲಿ ಸಾಹಿತ್ಯ ನಿರ್ಮಾಣವಾಗುವುದಕ್ಕೆ ಅವಶ್ಯವಾದ ಸ್ಫೂರ್ತಿ ಬತ್ತಿದಂತಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಬ್ರಿಟಿಷರು ಈ ದೇಶದಲ್ಲಿ ನೆಲೆಯಾಗಿ ನಿಂತ ಮೇಲೆ ದೇಶದಲ್ಲಿ ಸಾಂಸ್ಕೃತಿಕ ಪುನರುಜ್ಜೀವನ ತಲೆದೋರಿ ಆಂಗ್ಲ ಶಿಕ್ಷಣ ಪ್ರಾರಂಭವಾಗಿ ಸಾಹಿತಿಗಳು ಗ್ರಂಥ ರಚನೆಗೆ ತೊಡಗಿದರು. ಇದು ಬಂಗಾಳದಲ್ಲಿ ಪ್ರಥಮ ಪ್ರಯತ್ನವಾಯಿತು. ಕನ್ನಡದಲ್ಲಿಯೂ ನವೀನ ಸಾಹಿತ್ಯಕ್ಕೆ ಚಾಲನೆ ದೊರೆಯಿತು. ಮೊದಲು ಅನುವಾದ ಕೃತಿಗಳ ಮೂಲಕವಾಗಿ ಹೊಸ ಸಾಹಿತ್ಯ ರಚನೆ ಪ್ರಾರಂಭವಾದವು.

ಅಂದಿನಿಂದ ಪ್ರಾರಂಭವಾದ ಆಧುನಿಕ ಕನ್ನಡ ಸಾಹಿತ್ಯ ಕೃಷಿ ಅವ್ಯಾಹತವಾಗಿ ಸಾಗುತ್ತಾ ಬಂದಿದೆ. ಇನ್ನು ಅಪಾರವಾದ ಕೆಲಸಗಳು ಈ ನಿಟ್ಟಿನಲ್ಲಿ ಆಗಬೇಕಾಗಿದೆ ಎಂಬುದನ್ನು ಮರೆಯುವಂತಿಲ್ಲ. ಈ ಹಿಂದಿನ ದೃಷ್ಟಿಯಿಂದ ವಿಚಾರಿಸಿದರೆ ನಮ್ಮ ಗುರಿ ಕನ್ನಡವನ್ನು ಬೆಳೆಸುವುದರ ಕಡೆಗೆ ಇರಬೇಕಾದ ಅದಕ್ಕೆ ಕನ್ನಡ ನುಡಿಯನ್ನು ಒಂದು ಪ್ರಬಲವಾದ ಮಾತನ್ನಾಗಿ ಏರ್ಪಡಿಸಬೇಕು. ಕನ್ನಡ ಸಾಹಿತ್ಯವನ್ನು ಒಳ್ಳೊಳ್ಳೆಯ ಸಾಹಿತ್ಯ ಪ್ರಕಾರಗಳಿಂದ ಅಲಂಕರಿಸಬೇಕು. ಕನ್ನಡ ನುಡಿಯನ್ನು ಆಧುನಿಕ ಜ್ಞಾನದ ಉತ್ಕೃಷ್ಟ ಸಾಧನವಾಗಿ

ಮಾರ್ಪಡಿಸಬೇಕು. ಆ ಮಟ್ಟಕ್ಕೆ ಕನ್ನಡವು ಏರಬೇಕಾದರೆ ಈಗಿರುವ ತನ್ನ ಶಬ್ದ ಸಾಮಗ್ರಿಯನ್ನು ನೂರ್ಮಡಿ ಹೆಚ್ಚಿಸಿಕೊಳ್ಳಬೇಕು. ವಾಕ್ಯ ರಚನೆಯ ಎಲ್ಲೆಕಟ್ಟುಗಳನ್ನು ವಿಸ್ತರಿಸಿಕೊಳ್ಳಬೇಕು. ಎಲ್ಲಾ ಮಾನವಿಕಶಾಸ್ತ್ರ ವಿಷಯಗಳಲ್ಲಿನ ಸೂಕ್ಷ್ಮವಾದ ಅರ್ಥ ವಿಶೇಷಗಳನ್ನೆಲ್ಲಾ ವಿಷದಪಡಿಸುವ ಶಕ್ತಿ ಕನ್ನಡ ನುಡಿಗೆ ಬರಬೇಕು. 'ಭಾವದ ನಾನಾ ಭೇದಗಳನ್ನು ಬಿತ್ತರಿಸುವ ಶಕ್ತಿ ಅದಕ್ಕುಂಟಾಗಬೇಕು. ಈ ರೀತಿಯ ಗುಣ ಕನ್ನಡಕ್ಕೆ ಬರದ ಹೊರತು ನಿಜವಾದ ಕನ್ನಡ ವಿಶ್ವವಿದ್ಯಾಲಯದ ಕಲ್ಪನೆ ಗಗನ ಕುಸುಮದಂತೆಯೆ ಸರಿ'.[೫೧] ಹಾಗಾದರೆ ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಯಾದ ಮೇಲೆ ಈ ಕನಸು ನನಸಾಗಿದೆಯೆ? ಗಗನಕುಸುಮ ಕೈಗೆಟುಕಿದೆ ಎಂದು ತಿಳಿಯಬಹುದೆ? 'ಆದರೆ ಕಾಲ ಉರುಳಿದಂತೆ ಸಾಹಿತ್ಯವೂ, ಸಂಸ್ಕೃತಿಯೂ ಮುಂದುವರೆಯುತ್ತಿವೆ ಎಂಬ ಭ್ರಮೆಯನ್ನು ನಾವು ಎಷ್ಟು ಬೇಗ ಬಿಟ್ಟರೆ ಅಷ್ಟು ಉತ್ತಮ. ಈ ಭ್ರಮೆಯಿಂದಾಗಿ ನಮ್ಮ ನಾಡಿನ ಕಲೆಗೂ, ಸಾಹಿತ್ಯಕ್ಕೂ, ಸಂಸ್ಕೃತಿಗೂ, ದರ್ಶನಗಳಿಗೂ ನಾವೇ ಅಪಕಾರ ಮಾಡಿದ್ದೇವೆ. ಕೇವಲ ಶತಮಾನಗಳು ಉರುಳಿದ ಮಾತ್ರಕ್ಕೆ ಸಾಹಿತ್ಯವಾಗಲಿ ಅಥವಾ ಸಂಸ್ಕೃತಿಯಾಗಲಿ ಮುಂದುವರೆಯುವುದಿಲ್ಲ. 'ಪ್ರಖ್ಯಾತ ಗ್ರಂಥಕರ್ತರಾದ ಜೆ.ಬಿ.ಎಸ್. ಹಾಲ್ಡೇನ್ ಅವರು ಇದನ್ನು ಸಮರ್ಥಿಸಿರುವುದನ್ನು ಕಾಣಬಹುದು. ಕ್ರಿ.ಪೂ. ೩೫೦೦ರಲ್ಲಿ 'ಉರ್' ಮುಂತಾದ ನಗರಗಳಲ್ಲಿದ್ದ ನಾಗರಿಕ ಜೀವನವು ಕಲಾಜೀವನವು ಹಲವು ವಿಚಾರಗಳಲ್ಲಿ ಇಂದಿನ ಇಂಗ್ಲೆಂಡಿಗಿಂತಲೂ ಶ್ರೇಷ್ಠವಾಗಿತ್ತು. ಆದರೆ ಈಗ ಅದು ಹೇಳ ಹೆಸರಿಲ್ಲದಂತಾಗಿದೆ'.[೫೨]

ಹಳೆಯ ಸಾಹಿತ್ಯ ನಮ್ಮ ಪೂರ್ವಾರ್ಜಿತ ಆಸ್ತಿ. ಅದರ ಅಗ್ಗಳಿಕೆಯ ಅರಿವು ಕನ್ನಡಿಗರಿಗೆ ಸಾಕಷ್ಟು ಆದಂತಿಲ್ಲ. ಈ ಕಾರಣದಿಂದಲೇ ನಾವು ಏಕಭಾಷಾ ಸಾಹಿತಿಗಳ ಮುಂದೆ ಕೈಯೊಡ್ಡಿದ್ದೇವೆ. 'ಸಾಹಿತ್ಯವು ಸಂಸ್ಕೃತಿಯ ಪ್ರತೀಕ. ನಮ್ಮ ಸಂಸ್ಕೃತಿಯ ಸಂಪೂರ್ಣ ಅರಿವಾಗಬೇಕಾದರೆ ನಮ್ಮ ಹಳೆಯ ಸಾಹಿತ್ಯದ ಆಳವಾದ ಹಾಗೂ ಸಾಂಗೋಪಾಂಗವಾದ ಅಭ್ಯಾಸವನ್ನು ಮಾಡುವುದು ಅತ್ಯಂತ ಅವಶ್ಯ. ಬಹುಮುಖವಾದ ನಾಗರೀಕತೆ ಮತ್ತು ಸಂಸ್ಕೃತಿಯ ಅಂಶಗಳು ಸ್ಪಷ್ಟವಾಗಿ ಚಿತ್ರಿತವಾಗಿವೆ. ನಮ್ಮ ನಾಡಿನ ಮಹಾನ್ ವ್ಯಕ್ತಿಗಳ ಮತ್ತು ರಾಜ್ಯ ಸಾಮ್ರಾಜ್ಯಗಳ ಚರಿತ್ರಾತ್ಮಕ ಹಾಗೂ ಐತಿಹಾಸಿಕ ಅಂಶಗಳು ಸೂಕ್ಷ್ಮವಾಗಿ ಹುದುಗಿವೆ. ಈ ಎಲ್ಲದರ ವಿವರವಾದ ಮತ್ತು ಶಾಸ್ತ್ರೀಯವಾದ ಅಭ್ಯಾಸ ಇಂದು ನಡೆಯಬೇಕು'.[೫೩] ಹೊಸ ಸಾಹಿತ್ಯಗಳು ಹೊಸ ಹೊಸ ಪ್ರಕಾರಗಳಲ್ಲಿ ಸೃಷ್ಟಿಯಾಗುತ್ತಿವೆ. ಸಾಹಿತ್ಯವು ಎಲ್ಲರಿಗೂ ಓದುವಂತೆ ರಚಿತವಾಗಬೇಕು. ಜ್ಞಾನದ ಹಂದರವಾದಂತಹ ಸಾಹಿತ್ಯ ಸೃಷ್ಟಿಯಾಗಬೇಕು. ಜೊತೆಗೆ ಸಾಹಿತ್ಯದ ಸಂಗ್ರಹವಾಗಬೇಕು. ಹೀಗೆ ಹಿಂದಿನ ಮತ್ತು ಇಂದಿನ ಕನ್ನಡ ಸಾಹಿತ್ಯವನ್ನು ವಿವೇಚಿಸಿರುವುದನ್ನು ಕಾಣಬಹುದು.

**೫. ಜನಪದ ಸಾಹಿತ್ಯದ ಬಗ್ಗೆ**

ಈ ಭಾಷಣಗಳಲ್ಲಿ ಕನ್ನಡ ಭಾಷೆ ಸಾಹಿತ್ಯ ಎಲ್ಲವೂ ಗ್ರಾಂಥಿಕ ರೂಪದಲ್ಲಿರುವುದನ್ನು ಮಾತ್ರ ಅವಗಾಹನೆಗೆ ತೆಗೆದುಕೊಳ್ಳಲಾಗಿದೆ. ನಮ್ಮ ನುಡಿ, ಸಾಹಿತ್ಯ ಇವುಗಳ ವಿಸ್ತಾರತೆಗೆ ಅರಳುವಿಕೆಗೆ ಮೂಲ ಸೆಲೆಯಾಗಿರುವುದು ಜನಪದ ಸಾಹಿತ್ಯ. ಇಂಥ ಮೂಲ ಸೆಲೆಯ ಬಗ್ಗೆ ಚರ್ಚೆಗಳು ನಡೆದಿರುವುದು ಕಡಿಮೆಯೆ. ಕೇವಲ ಅಕ್ಷರಭ್ಯಾಸಗಳ ಮೂಲಕ ಅಭಿವ್ಯಕ್ತಗೊಂಡಿರುವ ಸಾಹಿತ್ಯ ಮಾತ್ರವೇ ಶ್ರೇಷ್ಠ ಸ್ಥಾನವನ್ನು ಸಮಾಜದಲ್ಲಿ ಪಡೆಯುತ್ತಾ ಬಂದಿತು. ಆ ಸಾಹಿತ್ಯದ ಹುಟ್ಟು ಇರುವುದು ಈ ಮೌಖಿಕ ಸಂಪ್ರದಾಯದಲ್ಲಿ.

ಅವರಲ್ಲಿ ಅಕ್ಷರ ಜ್ಞಾನವಿಲ್ಲದೆ ಹೋದರೂ ತಮ್ಮಲ್ಲಿನ ಅನುಭವದ ಮೂಲಕ ಪದಗಳನ್ನು ಕಟ್ಟುವ ಮೂಲಕ ಲೆಕ್ಕವಿಲ್ಲದಷ್ಟು ಸಾಹಿತ್ಯ ರಚನೆಗೆ ಕಾರಣ ಕರ್ತೃಗಳಾಗಿದ್ದಾರೆ. ಕಥೆ, ಗಾದೆ, ಒಗಟು, ಲಾವಣಿ, ಕಥನಗೀತೆ ಇತ್ಯಾದಿ ರಚನೆಗಳೆಲ್ಲವೂ ಪ್ರತಿಭೆಗೆ ಹಿಡಿದ ಕೈಗನ್ನಡಿಯಾಗಿವೆ. ಸಾಮೂಹಿಕ ವ್ಯಕ್ತಿತ್ವವೇ ಅಲ್ಲಿ ಹೊಸ ರೂಪ ಪಡೆಯುತ್ತಾ ಬಂದಿರುವುದನ್ನು ನಮ್ಮ ಜನಪದ ಸಾಹಿತ್ಯದಲ್ಲಿ ಕಾಣಬಹುದು. ಬರೆಹ, ಸಂಸ್ಕೃತಿಯಿಂದ ದೂರಾದರು ಕೂಡ ಬದುಕಿನ ಎಲ್ಲ ಅನುಭವಗಳನ್ನು ಕಟ್ಟಿಕೊಡುತ್ತಲೆ ಬಂದಿದ್ದಾರೆ. ಸಾಹಿತ್ಯದ ಮೂಲ ಕರ್ತೃಗಳು ಇವರು. ಆದರೆ ಸಾಹಿತ್ಯ ಚರಿತ್ರೆಯಲ್ಲಿದೆಯೇ ಇವರ ಸ್ಥಾನ? ಮಹಾಕಾವ್ಯಗಳೆಂದು ಇಂದು ಜಗತ್ತಿನಾದ್ಯಾಂತ ಶ್ರೇಷ್ಠ ಸ್ಥಾನದಲ್ಲಿ ಮೆರೆಯುವ ಕೃತಿಗಳೆಲ್ಲಾ ಮೂಲ ಈ ಜನಪದರು ಹೆಣೆಯುತ್ತಿದ್ದ ಕಥೆಗಳು. ಬದುಕಿನ ಜೀವಂತಿಕೆಯನ್ನು ಜನಪದ ಸಾಹಿತ್ಯದಲ್ಲಿ ಕಾಣಬಹುದು.

ಇಂದಿನ ಶಿಷ್ಟ ಲೇಖನಿಗೆ ಚೈತನ್ಯವನ್ನು ಸ್ಫೂರ್ತಿಯನ್ನು ತಂದು ಕೊಟ್ಟಿರುವುದೇ ಈ ಜನಪದರ ಬದುಕು ಮತ್ತು ಸಾಹಿತ್ಯ. ಈ ಸಂದರ್ಭದಲ್ಲಿ ನಮ್ಮ ಹಿರಿಯ ಸಾಹಿತಿಗಳನೇಕರು ಅಧ್ಯಕ್ಷೀಯ ಸ್ಥಾನದಲ್ಲಿರೂ ಈ ಬಗ್ಗೆ ಚರ್ಚೆ ನಡೆಸದಿರುವುದು ಒಂದು ವಿಷಾದನೀಯವೇ ಸರಿ. ನಮ್ಮ ಕನ್ನಡ ಸಾಹಿತ್ಯದ ಬಹು ದೊಡ್ಡ ಪಾಲಿರುವುದೇ ಈ ದೇಶೀಯತೆಯಲ್ಲಿ. ಮಣ್ಣಿನ ವಾಸನೆಯಿಂದ ಸೋಪಜ್ಞತೆಯಿಂದ, ತನ್ನತನದ ಬನಿಯಿಂದ ಇಡೀ ಬದುಕಿನ ದನಿಯಾಗಿ ಧ್ವನಿಯಾಗಿ, ಮೂಡಿರುವುದು ಈ ಜನಪದ ಸಾಹಿತ್ಯ. ಇಷ್ಟು ದೊಡ್ಡ ಸಂಪತ್ತನ್ನು ಬಿಟ್ಟು ಸಾಹಿತ್ಯ ಚರಿತ್ರೆಯನ್ನು ಕಟ್ಟುವುದು ನಮ್ಮ ಸಾಹಿತ್ಯದ ಪ್ರಾಚೀನತೆ ಪರಂಪರೆಯನ್ನು ಹೇಳುವುದರಿಂದ ಸಾಹಿತ್ಯ ಚರಿತ್ರೆಯನ್ನು ಒಂದು ಮಗ್ಗಲಿನಿಂದ ಮಾತ್ರ ನೋಡಿದಂತಾಗುತ್ತದೆ. ಸಾಹಿತ್ಯ ಚರಿತ್ರೆಯಲ್ಲಿ ಇದರಿಂದ ಬಹಳಷ್ಟು ಪುಟಗಳು ಶೂನ್ಯವನ್ನಾವರಿಸಿ ನಿರ್ಮಿತವಾಗಿವೆ. ಕಲೆಗಳ ಬಗ್ಗೆ ಚರ್ಚೆ ಮಾಡುವಾಗ ಕೂಡಾ ಜನಪದ ಕಲೆಗಳನ್ನು ಗಣನೆಗೆ ತೆಗೆದುಕೊಂಡಿಲ್ಲ'.[೫೪] ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನಾಟ್ಯ ಇತ್ಯಾದಿಗಳು ಶಾಸ್ತ್ರೀಯ ಸ್ಥಾನ ಪಡೆದವುಗಳನ್ನು ಮಾತ್ರ ಹೆಸರಿಸಿ ಅವುಗಳ ಸ್ಥಿತಿಗತಿಯ ಬಗ್ಗೆ ಹೇಳಲಾಗಿದೆ. ಆದರೆ ಜನಪದ ಕುಣಿತಗಳನ್ನು, ಹಾಡುಗಳನ್ನು, ಬಯಲಾಟ, ಯಕ್ಷಗಾನ ಇತ್ಯಾದಿಗಳನ್ನು ಕೈಬಿಡಲಾಗಿದೆ.

ಏಕೀಕರಣದ ನಂತರ ಕಾಲದಲ್ಲಿ ಸಂಸ್ಕೃತಿಯ ಬಗ್ಗೆ ಹಲವಾರು ಚರ್ಚೆಗಳು ನಡೆದಿವೆ. ಸಾಹಿತ್ಯ ಸಮ್ಮೇಳನಗಳಲ್ಲಿ ಏಕೆ ಈ ರೀತಿಯ ಚರ್ಚೆ ಬಂದಿಲ್ಲ? ಸಂಸ್ಕೃತಿ ಮೂಡುವುದೇ, ರೂಪಗೊಳ್ಳುವುದೇ ಜನಪದರಿಂದ. ಅವರ ಬದುಕಿನ ಕ್ರಮದಿಂದ. ಸಂಸ್ಕೃತಿಯ ಒಂದು ಭಾಗವಾಗಿರುವ ಜನಪದ ಕಲೆಗಳಿಗೆ ಯಾವ ಸ್ಥಾನವನ್ನು ನೀಡಲಾಗಿದೆ. ಅಂದಿನ ಒತ್ತಡಗಳು ಪರಿಸ್ಥಿತಿಗಳು ನಾಡನ್ನು ಒಂದಾಗಿಸುವುದಾಗಿತ್ತು. ಒಪ್ಪಬಹುದು. ಆದರೆ ಸಮ್ಮೇಳನದ ಸಂದರ್ಭದಲ್ಲಿ ಉಳಿದ ಎಲ್ಲಾ ವಿಷಯಗಳ ಬಗ್ಗೆ ಚರ್ಚೆ ನಡೆದಿವೆ. ಆ ಸಂದರ್ಭದಲ್ಲಿ ಜನಪದ ಸಾಹಿತ್ಯವನ್ನು ಚರ್ಚಿಸಬಹುದಾಗಿತ್ತು. ಇಲ್ಲಿ ಅಧ್ಯಕ್ಷರ ಒಲವು ಮತ್ತು ದೃಷ್ಟಿಕೋನ ಹೇಗಿತ್ತು ಎನ್ನವುದು ಸ್ಪಷ್ಟವಾಗುತ್ತಿದೆ. ಸಂಶೋಧನೆಯ ಕೆಲವು ಕಡೆ ಮಾತ್ರ 'ಜನರಲ್ಲಿ ಪ್ರಚಾರದಲ್ಲಿರುವ ದಂತಕಥೆಗಳು ಹಾಡುಗಳು, ಸ್ಥಳ ಪುರಾಣ ಮೊದಲಾದವು ಹೇರಳವಾಗಿ ದೊರೆಯುವವು. ಇದನ್ನೆಲ್ಲಾ ಸಂಗ್ರಹಿಸಿ ಒಂದೆಡೆಯಲ್ಲಿ ಕೂಡಿಸುವುದು ಮೊದಲನೆಯ ಕೆಲಸ'[೫೫] ಎಂದು ಹೇಳಿರುವುದನ್ನು ಕಾಣಬಹುದು. ಜನಪದ ಸಾಹಿತ್ಯವನ್ನು ಸಂಗ್ರಹ ಮಾಡುವುದು ಪ್ರಾದೇಶಿಕ ಭಾಷೆಗಳ ವೈಲಕ್ಷಣಗಳನ್ನು

ಗಮನಿಸಿ ಅವುಗಳ ಸ್ವರೂಪವನ್ನು ವರ್ಣಿಸುವುದು ಕನ್ನಡ ವಿದ್ವತ್ತಿನ ಮುಖ್ಯ ಅಂಗಗಾಳಗಿವೆ. ಹಳ್ಳಿ ಹಳ್ಳಿಗಳಲ್ಲಿ ಅಲೆದಾಡಿ ಅಲ್ಲಿಯ ಜನರೊಡನೆ ಸೌಜನ್ಯದಿಂದ ನಡೆದುಕೊಂಡು ಅವರ ಸಮಯವನ್ನು ಕಾದು, ಕಾಡಿ, ಬೇಡಿ, ಅಂಗಲಾಚಿ ಅವರಿಂದ ಕಥೆಗಳನ್ನು ಹಾಡುಗಳನ್ನು ಹೇಳಿಸಿ ಅವುಗಳನ್ನು ಬರೆದುಕೊಳ್ಳುವ ಕಾರ್ಯ ನಿಜವಾಗಿಯೂ ಪ್ರಯಾಸಕರ. ಈ ಸಾಹಿತ್ಯ ಕುಸುಮ ಬಾಡಿ ಹೋಗುವ ಮುನ್ನವೇ ಅವರ ಹಾಡುಗಳ ದಾಟಿ, ಬೆಡಗು, ಬಿನ್ನಾಣ, ಮಾಧುರ್ಯಗಳನ್ನು ಗ್ರಾಂಫೋನ್, ಟೇಪ್ ರೆಕಾರ್ಡರ್ ಇತ್ಯಾದಿಗಳಲ್ಲಿ ಸಂಗ್ರಹಿಸಿಡಬೇಕು. ಶ್ರೀಮಾನ್ ಕ.ರಾ.ಕೃ. ಎಂ. ಕೃಷ್ಣಮೂರ್ತಿ, ಎಲ್. ಗುಂಡಪ್ಪ, ಬಿ.ಎನ್. ರಂಗಸ್ವಾಮಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಆರ್.ಎಸ್. ಪಂಚಮುಖಿ, ಎಸ್.ಕೆ. ಕರೀಂಖಾನ್, ಡಾ. ಬಿ.ಎಸ್. ಗದಗಿಮಠ ಈ ಎಲ್ಲಾ ಕಾರ್ಯ ಸಾಧಕರು ಜನಪದ ಸಾಹಿತ್ಯ ಸಂಶೋಧನೆ ಮತ್ತು ಸಂಪಾದನಾ ಕಾರ್ಯಕ್ಕೆ ತಮ್ಮನ್ನೇ ತೊಡಗಿಸಿಕೊಂಡಿದ್ದಾರೆ[೫೬] ಎನ್ನುವುದನ್ನು ಮರೆಯುವಂತಿಲ್ಲ.

**೬. ಸಂಶೋಧನೆ**

129998

ಅಧ್ಯಕ್ಷರ ಭಾಷಣಗಳಲ್ಲಿ ಸಂಶೋಧನೆಯ ಬಗ್ಗೆ ಕೆಲವು ಚರ್ಚೆಗಳು ನಡೆದಿವೆ. ಸಂಶೋಧನೆ ಎಂದರೆ ಯಾವ ಯಾವ ಕ್ಷೇತ್ರದಲ್ಲಿ ಸಂಶೋಧನೆ ನಡೆಯಬೇಕು? ಸಂಶೋಧಕನ ಜವಬ್ದಾರಿ ಏನು? ಇತ್ಯಾದಿ ವಿಷಯಗಳನ್ನು ಈ ಸಂದರ್ಭಗಳಲ್ಲಿ ಚರ್ಚಿಸಲಾಗಿದೆ. ಕನ್ನಡ ನಾಡಿನ ಭಾಷೆ, ಇತಿಹಾಸಗಳ ಬಗ್ಗೆ ಒಂದು ಕಲ್ಪನೆ ರೂಪ ಮೂಡಿರುವುದೇ ಈ ಸಂಶೋಧನೆಯ ಮೂಲಕ. ಇದು ವಸಾಹತುಶಾಹಿ ಕಾಲದಿಂದ ಆರಂಭವಾಯಿತು. ಅದಕ್ಕೊಂದು ಅಧಿಕೃತತೆ ದೊರೆಯಿತು. ಆಗಿನ ಆ ಸಂಶೋಧನೆಯು ಪೌರಾತ್ಯವಾದಿ/ಸಂಶೋಧನೆ ಎಂದು ಗುರುತಿಸಲಾಗಿದೆ. ಈ ನಿಟ್ಟಿನಲ್ಲಿ ಕನ್ನಡ ನಾಡಿನಲ್ಲಿ ಕನ್ನಡದಲ್ಲಿ ಕನ್ನಡದ ಸಂಶೋಧನೆಯಾಗುವುದನ್ನು ಬ್ರಿಟೀಷ್ ಅಧಿಕಾರಿಗಳು ಬಂದು ತಿಳಿಸುವಲ್ಲಿನಿಂದ ಕನ್ನಡದ ಸಂಶೋಧನೆಯ ಚರಿತ್ರೆ ಆರಂಭವಾಯಿತೆನ್ನಬಹುದು. ಭಾಷೆ, ಸಾಹಿತ್ಯ, ಸಂಸ್ಕೃತಿ, ಇವುಗಳ ಪೂರ್ವವನ್ನು ತಿಳಿಯಲು ವಸಾಹತುಶಾಹಿ ಮಾದರಿಯ ಸಂಶೋಧನೆಗಳು ತುಂಬಾ ಸಹಕಾರಿಯಾದವು. ಇ.ಪಿ.ರೈಸ್, ಬಿ.ಎಲ್.ರೈಸ್, ಕಿಟ್ಟಲ್, ಕಾಲ್ಡ್‌ವೆಲ್ ಇತ್ಯಾದಿ ಅಧಿಕಾರಿಗಳ ಜೊತೆಗೆ ಸಂಶೋಧಕರಾಗಿ ಕಾರ್ಯ ನಿರ್ವಹಿಸಿರುವುದನ್ನು ಕಾಣಬಹುದಾಗಿದೆ. ಇವರ ಜಾಡಿನಲ್ಲಿ ರಾಷ್ಟ್ರೀಯವಾದಿ ಸಂಶೋಧನೆಗಳು ದೇಸೀಯ ನೆಲೆಗಟ್ಟಿನ ಸಂಶೋಧನೆಗಳು ಆರಂಭವಾದವು. ಅಂದಿನಿಂದ ಪ್ರಾರಂಭವಾದ ನಾಡು ನುಡಿ, ಸಂಸ್ಕೃತಿ, ಸಾಹಿತ್ಯ ಬದುಕು ಇವುಗಳ ಸಂಶೋಧನೆ ಇಂದಿಗೂ ಅವ್ಯಾಹತವಾಗಿ ಮುಂದುವರೆದುಕೊಂಡು ಹೋಗುತ್ತಿದೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಸಂಶೋ ಧನೆಯು ತನ್ನ ಫಸಲನ್ನು ಕಾಣಲು ಪ್ರಾರಂಭಿಸಿತು. ವಿಶ್ವವಿದ್ಯಾನಿಲಯಗಳ ಮಟ್ಟದಲ್ಲಿ ಇವುಗಳಿಗೆ ಹೆಚ್ಚಿನ ಪ್ರೋತ್ಸಾಹ ಮತ್ತು ಅವಕಾಶಗಳನ್ನು ನೀಡಲಾಗಿದೆ. ಸಂಶೋಧಕನಾದವನು ಹೇಗಿರಬೇಕು ಎನ್ನುವುದನ್ನು ಅಧ್ಯಕ್ಷರುಗಳು ತಿಳಿಸಿದ್ದಾರೆ. 'ಸಂಶೋಧನೆ ಎನ್ನುವುದು ಕಲೆಯೂ ಹೌದು. ಈ ಕಾರ್ಯದಲ್ಲಿ ತೊಡಗಿರುವವರಿಗೆ ಅಸಾಧಾರಣ ಪಾಂಡಿತ್ಯ ಬೇಕು. ಸತತ ಶ್ರಮ, ವಿವೇಚನಾ ಶಕ್ತಿ ಇವುಗಳ ಜೊತೆಗೆ ಸಂಶೋಧನಾ ಕಲೆಯಲ್ಲಿಯೇ ಯೋಗ್ಯ ಶಿಕ್ಷಣ ಇಲ್ಲವೆ ಅನುಭವವು ಬೇಕು. ಇದು ಒಂದು ರೀತಿಯ ತಪಶ್ಚರಣ. ಸಂಶೋಧಕನು ಸತ್ಯಾನ್ವೇಷಣೆಯನ್ನೇ ತನ್ನ ಏಕಮಾನ ಗುರಿಯಾಗಿಟ್ಟುಕೊಳ್ಳಬೇಕು. ತನ್ನ ಪೂರ್ವ ಪ್ರಮೇಯುಗಳಿಗೆ ಅನುಕೂಲವಾಗುವಂತೆ ಸಂಶೋಧನಾ ಫಲಿತಗಳನ್ನು



ಡಾ. ಗಿನ್ನಿಜಾ ಗ್ರಂಥಾಲಯ.
ಕನ್ನಡ ವಿಶ್ವವಿದ್ಯಾಲಯ. ಹಂಪಿ.

ಉಪಯೋಗಿಸಿಕೊಳ್ಳಬಾರದು. ವಾದ ವಿವಾದದ ಗೊಂದಲವನ್ನುಂಟು ಮಾಡುವುದು ಸಂಶೋಧನೆ ಎನಿಸಲಾರದು'.[೫೭] ಇಂತಹ ಸಂಶೋಧನಾ ಕಾರ್ಯವು ಹೆಚ್ಚು ಜವಾಬ್ದಾರಿಯುತವಾದುದರಿಂದ ಅಧಿಕೃತವಾಗಿ ಸಾಹಿತ್ಯ ಪರಿಷತ್ತು ಸಂಶೋಧನೆಯ ಶಾಖೆಗಳನ್ನು ಆರಂಭಿಸಿ ಕಾರ್ಯಪ್ರವೃತ್ತರಾಗಬೇಕು. ಸಂಶೋಧನೆಗೆ ಸಂಬಂಧಿಸಿದಂತೆ ಇದುವರೆಗೂ ನಡೆದ ಸಂಶೋಧನೆಗಳ ಸಂಗ್ರಹಣ ಕಾರ್ಯಕ್ಕೆ ಮ್ಯೂಸಿಯಂಗಳ ವ್ಯವಸ್ಥೆಯನ್ನು ಸಹ ನಾವು ಕಾಣಬಹುದು. ಇಲ್ಲಿ ಇನ್ನೊಂದು ಮಾತನ್ನು ಗಮನಿಸಬೇಕು. 'ಇತಿಹಾಸ ಕಲೆ, ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತೆ ಅನುಸಂಧಿಯ ಅಥವಾ ನಿದರ್ಶನ ಗ್ರಂಥಗಳನ್ನು ರಚಿಸುವ ಹೊಸ ಸಂಪ್ರದಾಯವೊಂದು ಆರಂಭ ವಾಗಬೇಕು'.[೫೮] ಕನ್ನಡ ನಾಡಿನಲ್ಲಿ ಸಂಶೋಧನೆಗೆ ಸಾಕಷ್ಟು ಪ್ರಮಾಣದ ಸಲಕರಣೆಗಳಿವೆ. ಜನಪದರಲ್ಲಿನ ಹಲವಾರು ವಿಷಯಗಳನ್ನು ಸಂಗ್ರಹಿಸುವುದು ಅವಶ್ಯವಾಗಿದೆ. ಈ ಹಿಂದೆ ಲೂಯಿ ರೈಸ್‌ರ ಎಫಿಗ್ರಾಫಿಯಾ ಕರ್ನಾಟಕ ಕೃತಿಯಂತೆ ಸುವ್ಯವಸ್ಥಿತವಾದ ಸಂಶೋಧನಾ ಕಾರ್ಯ ಇನ್ನೂ ಆಗಬೇಕಾಗಿದೆ'.[೫೯]

'ಈ ರೀತಿ ಸಂಗ್ರಹಿಸಿದ ಎಲ್ಲಾ ಮಾಹಿತಿಗಳನ್ನು ಸೂಕ್ಷ್ಮ ದೃಷ್ಟಿಯಿಂದ ಅಧ್ಯಯನ ಮಾಡಿ ಅವುಗಳಲ್ಲಿ ಅಡಗಿರುವ ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಸಂಗತಿಗಳನ್ನು ಹೊರ ತೆಗೆಯಬೇಕು. ಇಂಥ ಕಾರ್ಯಗಳನ್ನು ಮಾಡಲು ಸಂಸ್ಥೆಗಳನ್ನು ಕಟ್ಟಿಕೊಂಡು ಮಾಡಬೇಕು. ಭಾರತೀಯರಿಗೆ ಐತಿಹಾಸಿಕ ದೃಷ್ಟಿಯೇ ಇಲ್ಲವೆಂಬ ಪಾಶ್ಚಾತ್ಯರ ಆರೋಪವನ್ನು ಸುಳ್ಳು ಮಾಡಬೇಕು.[೬೦] ಕರ್ನಾಟಕವು ಉಜ್ವಲವಾದ ಇತಿಹಾಸವನ್ನು ಹೊಂದಿದೆ. ಆದರೆ ಆ ಇತಿಹಾಸದಲ್ಲಿ ಇನ್ನೂ ಕೆಲವು ಅರಸು ಮನೆತನಗಳ ಮಾಹಿತಿಗಳು ಉಪಲಬ್ಧವಿಲ್ಲ. ಆದ್ದರಿಂದ ಕರ್ನಾಟಕದ ನಿಜವಾದ ಇತಿಹಾಸ ರಚನೆಯಾಗಬೇಕು. ಇನ್ನೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೂ ಸಾಕಷ್ಟು ಸಂಶೋಧನೆ ನಡೆಯಬೇಕಿದೆ. ಕನ್ನಡ ಭಾಷೆಯ ಹುಟ್ಟು ಬೆಳವಣಿಗೆಯ ಬಗ್ಗೆ ಅದರ ರಚನೆಯ ಬಗ್ಗೆ ನಿಖರವಾದ ಸಂಶೋಧನೆಗಳ ಅಗತ್ಯವಿದೆ. ಕನ್ನಡ ಭಾಷೆಯನ್ನು ಮುಖ್ಯವಾಗಿಟ್ಟುಕೊಂಡು ಅದರ ಮೇಲೆ ಉಳಿದ ದ್ರಾವಿಡ ಭಾಷೆಗಳ ಮತ್ತು ಆರ್ಯ ಭಾಷೆಗಳ ಪ್ರಭಾವ ಎಷ್ಟರ ಮಟ್ಟಿಗೆ ಆಗಿದೆ ಎಂಬುದನ್ನು ತಿಳಿಸುವ ಇಂಥ ಗ್ರಂಥಗಳನ್ನು ಅವಶ್ಯವಾಗಿ ರಚಿಸಬೇಕಾಗಿದೆ. ಇನ್ನು ಧಾರ್ಮಿಕ ಕ್ಷೇತ್ರದಲ್ಲಿಯೂ ಕನ್ನಡ ನಾಡಿನಲ್ಲಿ ಸಂಶೋಧನೆ ನಡೆಯಬೇಕು. ಸಾಹಿತ್ಯಕ ಧಾರ್ಮಿಕ, ಇತಿಹಾಸ, ಚರಿತ್ರೆ, ಇತ್ಯಾದಿಗಳಿಗೆ ಒಂದಕ್ಕೊಂದು ಸಂಬಂಧ ಇದೆ ಎನ್ನುವುದಾದರೆ ಇವುಗಳ ಬಗ್ಗೆ ಸಂಶೋಧನೆಗಳು ನಡೆಯಬೇಕಾಗಿದೆ'.[೬೧] ಹೀಗೆ ಸಾಕಷ್ಟು ವಿಷಯಗಳ ಬಗ್ಗೆ ಸಂಶೋಧನಾ ಕಾರ್ಯ ನಡೆಯಬೇಕಾಗಿದೆ. ಸಂಶೋಧನೆಯನ್ನು ಆರಂಭಿಸುವ ಮೊದಲು ಅದರ ಮೂಲತತ್ವಗಳನ್ನು ಸರಿಯಾಗಿ ಅರ್ಥೈಯಿಸಿಕೊಳ್ಳಬೇಕು. ಸಂಶೋಧನೆ ಎನ್ನುವುದು ಅಷ್ಟೊಂದು ಸುಲಭವಾದುದಲ್ಲ. ಅದೊಂದು ತಪಸ್ಸು. ಸಂಶೋಧಕನಲ್ಲಿ ಸತ್ಯಾನ್ವೇಷಣೆ ಸತತ ಉದ್ಯೋಗ ತಾಳ್ಮೆ, ತೀಕ್ಷ್ಣ ಬುದ್ಧಿ ಸದ್ವಿವೇಕ ಬುದ್ಧಿ, ವಿಷಯ ತಲ್ಲೀನತೆ ಮೊದಲಾದ ಗುಣಗಳು ಇರಬೇಕು. ಇಲ್ಲಿ ಮತ್ತೊಂದು ವಿಚಾರವನ್ನು ಹೇಳುವುದಾದರೆ ಸಂಶೋಧನೆಯಲ್ಲಿ ಸತ್ಯದ ಮಹತ್ವದ ಬಗ್ಗೆ ಸತ್ಯ ಎಂದು ನಂಬಿಕೊಂಡಿರುವುದು ಸಂಶೋಧನೆಯಲ್ಲಿ ಅದೇ ಕೊನೆಯ ಸತ್ಯವಾಗಿರುವುದಿಲ್ಲ. ಮೂಲ ಸತ್ಯದ ಬಗ್ಗೆ ಹುಡುಕಾಟ ನಡೆಯಬೇಕಾಗಿದೆ. ಸಂಶೋಧಕರೆಲ್ಲರೂ ಸತ್ಯವನ್ನು ಹುಡುಕುತ್ತೇವೆಂದ ವರೆಲ್ಲರೂ ಸತ್ಯವನ್ನು ಹುಡುಕುವುದಿಲ್ಲ. ಇವೆಲ್ಲವುಗಳ ಮಧ್ಯ ಈ ಸತ್ಯ ಎಂದರೇನು? ಎನ್ನುವ ಪ್ರಶ್ನೆ ತುಂಬಾ

ಪ್ರಮುಖವೆನಿಸುತ್ತದೆ.

ಸತ್ಯ ಎನ್ನವುದು ಈಗಾಗಲೇ ಇದೆಯೋ ಅಥವಾ ಇಲ್ಲವೋ? ಸತ್ಯ ಇದೆ ಎನ್ನುವುದಾದರೆ ಅದನ್ನು ಹುಡುಕುವ ಕ್ರಿಯೆಯೇ ಇರುವುದಿಲ್ಲ. ಹಾಗಾದರೆ ಸತ್ಯ ಇಲ್ಲವೆಂದು ಅದನ್ನು ಹುಡುಕ ಹೊರಟರೆ ಸಂಶೋಧಕನು ಕೊನೆಗೆ ಸತ್ಯವನ್ನೇ ಹೇಳುತ್ತಾನೆ ಎನ್ನಲಾಗದು. ತನ್ನ ಸಂಶೋಧನೆಯಲ್ಲಿ ಅದುವರೆಗಿನ ಅಧ್ಯಯನ ಫಲಿತಗಳಲ್ಲಿ ಸಂಶೋಧನೆಯ ದೃಷ್ಟಿಯಲ್ಲಿ ಸತ್ಯವಾಗಿ ಮಾರ್ಪಡುವುದು. ಆದರೆ ಅದೇ ಅಂತಿಮ ಸತ್ಯವಲ್ಲ. ಈ ವಿಷಯದ ಬಗ್ಗೆ ಡಾ. ಕೆ.ವಿ. ನಾರಾಯಣ ಅವರ ಲೇಖನವನ್ನು ಗಮನಿಸಬಹುದಾಗಿದೆ. ಸಂಶೋಧಕನು ಉತ್ತಮ ಮಾರ್ಗದರ್ಶಕರನ್ನು ಹೊಂದಿರಬೇಕಾಗಿರುವುದು ಅವಶ್ಯ. ಕವಿಗಳು ಅನುಭವಿಸುವ ಕಾವ್ಯಾನಂದ ಬ್ರಹ್ಮಜ್ಞಾನಿಗಳು ಅನುಭವಿಸುವ ಬ್ರಹ್ಮಾನಂದ ಸಂಶೋಧಕನು ಅನುಭವಿಸುವ ತನ್ಮಯಾನಂದ ಇವೆಲ್ಲ ಒಂದೇ ಮಟ್ಟದವು'.[೨] ಕನ್ನಡ ಸಂಶೋಧನೆಯ ಕೆಲಸವು ನಡೆಯುವುದು ತುಂಬಾ ಅವಶ್ಯವಾಗಿದೆ. ಇದುವರೆಗೂ ಆಗಿರುವುದು ತೀರಾ ಕಡಿಮೆ ಪ್ರಮಾಣದಲ್ಲಿದೆ. ನಾಡಿನ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಅದ್ಭುತವಾದ ಮಾಹಿತಿಗಳು, ಆಧಾರಗಳು ಇದರಿಂದ ಲಭ್ಯವಾಗುತ್ತವೆ. ಆದ್ದರಿಂದ ಪ್ರಾಚ್ಯವಸ್ತು ಸಂಶೋಧನಾ ಇಲಾಖೆಯು ಈ ಬಗ್ಗೆ ಗಮನ ಹರಿಸಬೇಕಾಗಿದೆ. ವಿಶ್ವವಿದ್ಯಾಲಯಗಳು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಬೇಕಾಗಿದೆ. ಜೊತೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಇದಕ್ಕೆ ಧನಸಹಾಯ ಮಾಡಬೇಕಾಗಿದೆ'.[೬] ಈ ಪುರಾತತ್ವ ಇಲಾಖೆಯು ಕನ್ನಡ ವಿದ್ವತ್ತಿನ ಎಲ್ಲಾ ಶಾಖೆಗಳಿಗೂ ಬೇಕಾದ ಮೂಲ ಸಾಮಗ್ರಿಗಳನ್ನು ಕಾಲ ಕಾಲಕ್ಕೆ ಒದಗಿಸಿ ಕೊಡುವುದೆ? ಮೈಸೂರಿನಲ್ಲಿರುವ ಪುರಾತತ್ವ ಸಂಶೋಧನಾ ಇಲಾಖೆಯು ಬಿ.ಎಲ್. ರೈಸ್ ಅವರ ನೇತೃತ್ವದಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು.

ನಂತರ ಆರ್. ನರಸಿಂಹಾಚಾರ್ಯರು ಇದರ ಕಾರ್ಯವನ್ನು ಮುಂದುವರೆಸಿಕೊಂಡು ಹೋದರು. ಈ ಇಬ್ಬರ ಸಂಶೋಧನಾ ಕಾರ್ಯಗಳು ಸಂಶೋಧನಾ ಕ್ಷೇತ್ರದಲ್ಲಿ ಮೈಲುಗಲ್ಲುಗಳಾಗಿ ಉಳಿದಿರುವುದು ಸರ್ವವಿದಿತವಾದುದೆ ಆಗಿದೆ. ಆದರೆ ಇತ್ತೀಚೆಗೆ ಆ ಇಲಾಖೆಯ ಕೆಲಸಗಳು ಅಷ್ಟಾಗಿ ನಡೆಯುತ್ತಿಲ್ಲ. ಅದಕ್ಕೆ ಕಾರಣಗಳನ್ನು ಗುರುತಿಸಲಾಗಿದೆ. ೧. ಕೇಂದ್ರ ಪುರಾತತ್ವ ಇಲಾಖೆಯು ಭಾರತ ರಾಜ್ಯಾಂಗದ ೭ನೇಯ ಶೆಡ್ಯೂಲಿನಲ್ಲಿ ೬೭ನೇ ಕಲಂನಂತೆ ಮೈಸೂರು ರಾಜ್ಯದಲ್ಲಿನ ಹಳೆಬೀಡು, ಬೇಲೂರು, ಶ್ರವಣಬೆಳಗೊಳ, ಶ್ರೀರಂಗಪಟ್ಟಣ ಮುಂತಾದ ಎಡೆಗಳಲ್ಲಿರುವ ಶಿಲ್ಪ ಸ್ಮಾರಕಗಳನ್ನು ಕೇಂದ್ರಕ್ಕೆ ಒಪ್ಪಿಸಿಬಿಟ್ಟಿತು. ಅವುಗಳ ಮೇಲ್ವಿಚಾರಣೆಯನ್ನು ಮಾತ್ರ ಸ್ಥಳೀಯ ಇಲಾಖಾ ಅಧಿಕಾರಿಗಳಿಗೆ ಒಪ್ಪಿಸಿತು. ೨. ಅದು ಕೇಂದ್ರಕ್ಕೆ ಸೇರಿದ ಮೇಲೆ ರಾಜ್ಯ ಸರ್ಕಾರವೂ ಇದರ ಬಗ್ಗೆ ಅನಾದಾರವನ್ನೇ ಮಾಡಲು ಪ್ರಾರಂಭಿಸಿತು. ಆದರೆ ಮಾಡುವ ಕೆಲಸ ಸಾಕಷ್ಟಿದೆ. ಜೊತೆಗೆ ಇಂಡಿಯನ್ ಆಂಟಿಕ್ವೆರಿ, ಎಪಿಗ್ರಾಫಿಯಾ, ಇಂಡಿಕಾ ಮೊದಲಾದ ಇತರ ಪ್ರಕಟಿತ ಗ್ರಂಥ ರಾಶಿ ಚದುರಿ ಹೋಗಿರುವ ಕನ್ನಡ ಶಾಸನಗಳನ್ನು ಒಂದೆಡೆ ಸಂಕಲನ ಮಾಡಿ ಮುದ್ರಿಸುವ ಕೆಲಸವು ಇದೆ. ಆದ್ದರಿಂದ ಉಪೇಕ್ಷೆಯ ಮನೋಭಾವ ಸಲ್ಲದಾಗಿದೆ. ಹೀಗೆ ಕೇಂದ್ರ ಪುರಾತತ್ವ ಇಲಾಖೆ ಕೈಬಿಟ್ಟಿದ್ದು, ಪ್ರಾಂತೀಯ ಸರ್ಕಾರದ ಉಪೇಕ್ಷೆ ಎರಡು ಕಾರಣಗಳಿಂದ ಪುರಾತತ್ವ ಸಂಶೋಧನಾ ಕೇಂದ್ರವು ಸೊರಗಲು ಕಾರಣವಾಗಿದೆ. ಆದರೆ ಇದಕ್ಕೆ ಪರಿಹಾರಗಳನ್ನು ಸೂಚಿಸಲಾಗಿದೆ. ೧. ಕೇಂದ್ರ ಸರ್ಕಾರವನ್ನು ಒತ್ತಾಯಪಡಿಸಿ ಸಮಗ್ರವಾಗಿ ಈ ಇಲಾಖೆಯನ್ನು ಅದಕ್ಕೆ ವಹಿಸಿಕೊಟ್ಟು ವಿಶಾಲ ಕರ್ನಾಟಕಕ್ಕೆ

ಪ್ರತ್ಯೇಕ ಪುರಾತತ್ವ ಸಂಶೋಧನಾ ಕೇಂದ್ರವನ್ನು ಸ್ಥಾಪಿಸುವುದು ೨. ಪ್ರಾಂತೀಯ ಸರ್ಕಾರ ವಿಶಾಲ ಕರ್ನಾಟಕದ ದೃಷ್ಟಿಯಿಂದ ಈ ಇಲಾಖೆಯನ್ನು ವಿಸ್ತರಿಸಿ ಬಲಗೊಳಿಸಿ ಅದಕ್ಕೆ ಪ್ರತ್ಯೇಕ ಮುಖ್ಯಾಧಿಕಾರಿಯನ್ನು ನಿಯಮಿಸಬೇಕು. ಹೀಗೆ ಸಂಶೋಧನಾ ಕಾರ್ಯ ಮತ್ತು ಮಹತ್ವದ ಬಗ್ಗೆ ಸಮ್ಮೇಳನಗಳ ಅಧ್ಯಕ್ಷರು ಪ್ರಸ್ತಾಪಿಸಿರುವುದನ್ನು ಕಾಣಬಹುದು.

ಸಂಶೋಧನೆಯಲ್ಲಿ ಮತ್ತೊಂದು ಮಹತ್ತರವಾದ ಕಾರ್ಯ ನಡೆಯಬೇಕಾಗಿದೆ. ಅದು ಸಿರಿ ಭೂವಲಯ ಕೃತಿಯ ಮೇಲೆ ಅಮೋಘವರ್ಷನ ಗುರುವು, ಜಿನಸೇನಾಚಾರ್ಯನ ಶಿಷ್ಯನೂ ಆದ ಕುಮುದೇಂದು ವಿರಚಿತ ಈ ಕೃತಿಯು ವಿಶ್ವಸಾಹಿತ್ಯದಲ್ಲಿಯೇ ಒಂದು ಅಚ್ಚರಿಯ ಶೈಲಿ. ಕವಿಯು ಕ್ರಿ.ಶ. ೮ನೇ ಶತಮಾನದವನಾಗಿರಬೇಕು. ಅದೇ ಕಾಲದಲ್ಲಿ ಈ ಕೃತಿಯನ್ನು ರಚಿಸಿರಬಹುದೆಂದು ಸಂಪಾದಕರಾದ ಪಂಡಿತ ಎಲ್ಲಪ್ಪಶಾಸ್ತ್ರಿಗಳು ಶ್ರೀಕರ್ಲಮಂಗಲಂ ಶ್ರೀಕಂಠಯ್ಯನವರು ಅಭಿಪ್ರಾಯ ಪಡುತ್ತಾರೆ. 'ಸಿರಿಭೂವಲಯ' ಒಂದು ಗ್ರಂಥವಲ್ಲ. ಇದು ಗ್ರಂಥಗಳ ರಾಶಿ 'ಇರುವ ಭೂವಲಯದೊಳೇಳನೂರಹದಿನೆಂಟು ಭಾಷೆಗಳವತಾರ' ವಾಗಿದೆಯೆಂದು ಕವಿಯೇ ಹೇಳಿಕೊಂಡಿ ದ್ದಾನೆ. ತನ್ನ ಕಾವ್ಯ ಭಾಷೆಯನ್ನು 'ಸರ್ವಭಾಷಾಮಯಿ ಕರ್ನಾಟ' ವೆಂದೂ ವಿಶ್ವದ ಭೂತ ಭವಿಷತ್ ವರ್ತಮಾನಕ್ಕೆ ಸಂಬಂಧಿಸಿದ ಎಲ್ಲ ಭಾಷೆಗಳ ಜ್ಞಾನವನ್ನು ಈ ಗ್ರಂಥರಾಶಿಯಲ್ಲಿ ಗಣಿತಬದ್ಧವಾಗಿ ಅಡಗಿಸಿರುವುದಾಗಿ ಕುಮುದೇಂದು ಹೇಳುತ್ತಾನೆ. ಈ ಗ್ರಂಥ ಸಮುಚ್ಚಯದಲ್ಲಿ ಧರ್ಮ, ಸಾಹಿತ್ಯ, ವಿಜ್ಞಾನ ತಂತ್ರಶಾಸ್ತ್ರಗಳ ಮೇಲೆ ಗ್ರಂಥಗಳಿರುವುದಲ್ಲದೇ ಭಾರತದ ಇತಿಹಾಸ, ಸಂಸ್ಕೃತಿ, ಭಾಷೆಗಳ ಮೇಲೆ ಅನೇಕ ಹೊಸ ವಿಷಯಗಳು ನಿರೂಪಿತವಾಗಿವೆ. ಪ್ರಾಚೀನ ಭಾರತೀಯರಿಗೆ ಖಂಡಾಂತರಾಯನ, ಖಗೋಳ ವಿಜ್ಞಾನ, ಆಯುರ್ವೇದ, ಗಣಿತಶಾಸ್ತ್ರ, ಜೀವಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರಗಳಲ್ಲಿದ್ದ ಅರಿವನ್ನು ಕವಿ ಪ್ರಸ್ತಾಪಿಸುತ್ತಾನೆ. ಜಯಾಖ್ಯ ಸಂಹಿತಾ ಎಂಬ ಹೆಸರಿನ ಮೂಲ ಮಹಾಭಾರತವನ್ನೇ ನಿರೂಪಿಸುವುದಾಗಿಯೂ ಕುಮುದೆಂದು ಹೇಳುತ್ತಾನೆ. ರಾಮಾಯಣ, ಋಗ್ವೇದ, ಜೈನಧರ್ಮ, ಜೈನದರ್ಶನ, ಗ್ರಂಥಗಳು ಇದರಲ್ಲಿ ಅಡಕವಾಗಿವೆ. ಆದ್ದರಿಂದ ಈ ಗ್ರಂಥದ ಬಗ್ಗೆ ಹೆಚ್ಚಿನ ಸಂಶೋಧನೆಯ ಅವಶ್ಯಕತೆಯಿದೆ. ಇದಕ್ಕೆ ಒಂದು ಮಂಡಳಿಯನ್ನು ನಿರ್ಮಿಸಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗಮನ ಸೆಳೆದು ಸೂಕ್ತ ಕ್ರಮ ಕೈಗೊಳ್ಳಲು ಒತ್ತಡಪಡಿಸಬೇಕಾಗಿದೆ.[೬೪]

## ೭. ಭಾಷಾತರ

ಪ್ರಪಂಚದ ಬಹುತೇಕ ಜ್ಞಾನಶಾಸ್ತ್ರಗಳು, ವಿಷಯಗಳು ನಮಗೆ ಲಭ್ಯವಾಗಿರುವುದು ಭಾಷಾಂತರ ಕಾರ್ಯದಿಂದಲೇ. ಈ ಭಾಷಾಂತರ ಕಾರ್ಯವು ಪುರಾತನ ಕಾಲದಿಂದಲೂ ಮುಂದುವರೆದುಕೊಂಡು ಬಂದಿದೆ. ಇದರಿಂದ ಬೇರೆ ದೇಶಗಳ ಭಾಷೆ, ಸಂಸ್ಕೃತಿ, ಸಾಹಿತ್ಯ, ಕಲೆ ಇತ್ಯಾದಿ ವಿಷಯಗಳು ತಿಳಿಯಬಹುದು. ಅಲ್ಲದೇ ಇದು ಅಷ್ಟೇ ಜವಾಬ್ದಾರಿಯುತ ಕೆಲಸವು ಆಗಿದೆ. 'ಇಂಗ್ಲೀಷ್‌ನಲ್ಲಿ ಎಲಿಜಬತ್ ಯುಗದ ಸಾಹಿತ್ಯಕ್ಕೆ ಭಾಷಾಂತರಗಳ ನೆರವಿನಿಂದಲೆ ಬಹು ಹುಲುಸಾದ ಬೆಳೆ ಬರಲು ಸಾಧ್ಯವಾಯಿತು'.[೬೫] ನಾಡಿನ/ದೇಶದ ವಿದೇಶದ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಭಾಷಾಂತರ ಮಾಡುವುದರಿಂದ ಆ ಕೃತಿಗಳು ಎಲ್ಲರಿಗೂ ಲಭ್ಯವಾಗಿ ಅದರಲ್ಲಿರುವ ವಿಷಯವನ್ನು ಅರಿತುಕೊಳ್ಳಲು ಸಹಾಯವಾಗುತ್ತದೆ. ಭಾಷಾಂತರ ಕಾರ್ಯವು ಸಾಮಾನ್ಯ ವಾಚಕರಿಗೂ ಅರ್ಥವಾಗುವ ಹಾಗೆ ಮಾಡುವುದು ಅವಶ್ಯವಾಗಿದೆ. ಹಾಗೇ ನಮ್ಮ ಭಾಷೆಯ

ಕೃತಿಗಳನ್ನು ಇತರ ಭಾಷೆಗೆ ಅನುವಾದಿಸುವುದು/ಭಾಷಾಂತರಿಸುವುದು ಅಷ್ಟೇ ಮುಖ್ಯವಾಗಿದೆ. ಬಹುತೇಕ ಇಂಗ್ಲೀಷ್ ಭಾಷೆಯಲ್ಲಿನ ಕೃತಿಗಳು ವಿಚಾರಗಳು ಭಾಷಾಂತರಗೊಳ್ಳುತ್ತವೆ. ಭಾಷಾಂತರಕಾರನು ಎರಡು ಭಾಷೆಯಲ್ಲಿನ ಸಾಹಿತ್ಯವನ್ನು ಗ್ರಹಿಸಿರಬೇಕಾಗುತ್ತದೆ. ಭಾಷಾ ಸಂಸ್ಕರಣ ಗುಣವು ಇರಬೇಕು. ಇದರಿಂದ ಭಾಷಾಂತರ ಕಾರ್ಯವು ಅಷ್ಟು ಸುಲಭದ ಕೆಲಸವಲ್ಲ. ಒಂದು ಕೃತಿಯಲ್ಲಿ ಸಂಸ್ಕೃತ, ರಾಜಕೀಯ, ಆರ್ಥಿಕ ವಿಚಾರಗಳು ಒಳಗೊಂಡಿರುತ್ತವೆ. ಅವುಗಳು ಸರಿಯಾಗಿ ಅರ್ಥೈಸಿಕೊಂಡು ಭಾಷಾಂತರವನ್ನು ಮಾಡಬೇಕಾಗುತ್ತದೆ. ಭಾಷಾಂತರ /ರೂಪಾಂತರ/ಅನುವಾದ ಈ ಎಲ್ಲವು ಒಂದೇ ನೆಲೆಯಲ್ಲಿ ಮಾಡುವಂತಹವು. ಹೀಗೆ ಅಧ್ಯಕ್ಷರುಗಳು ಭಾಷಾಂತರದ ಬಗ್ಗೆ ಚರ್ಚಿಸಿರುವುದನ್ನು ಕಾಣಬಹುದು.

**೮. ಪರಿಭಾಷೆಗಳು**

ಭಾಷೆಯು ತನ್ನ ಅರ್ಥ ವ್ಯಾಪ್ತಿಗೆ ಒಳಪಡುವ ಅನೇಕ ಪದಗಳನ್ನು /ಶಬ್ಧಗಳನ್ನು ತನ್ನ ಒಡಲಲ್ಲಿ ಸೃಷ್ಟಿಸಿಕೊಳ್ಳುತ್ತಿರುತ್ತದೆ. ಕೆಲವು ಸಾಮಾನ್ಯವಾಗಿ ಎಲ್ಲರು ಬಳಸುವವುಗಳಾದರೆ ಮತ್ತೆ ಕೆಲವು ಸಂದರ್ಭಕ್ಕನುಗುಣವಾಗಿ ಅರ್ಥಕ್ಕನುಗುಣವಾಗಿ ಪದಗಳನ್ನು /ಶಬ್ಧಗಳನ್ನು ಬಳಸುವದುಂಟು. ಈ ಪದಗಳನ್ನು ಪರಿಭಾಷೆಗಳು ಎನ್ನುವರು. ಹೀಗೆ ಪ್ರಾದೇಶೀಕವಾಗಿ ಪ್ರಾಂತೀಕವಾಗಿ ಭಾಷಿಕವಾಗಿ ಹಲವಾರು ಪರಿಭಾಷೆಗಳು ರಚನೆಯಾಗಿವೆ. ಒಂದು ಭಾಷೆಯಲ್ಲಿರುವದನ್ನು ಮತ್ತೊಂದು ಭಾಷೆಗೆ ಅನುವಾದಿಸುವಾಗ/ ಭಾಷಾಂತರಿಸುವಾಗ ಈ ಪರಿಭಾಷೆಗಳು ಅರ್ಥ ಮುಂಗಟ್ಟುಗಳನ್ನು ಉಂಟು ಮಾಡುತ್ತದೆ. ವಿಜ್ಞಾನ, ಗಣಿತ, ಸಮಾಜ ವಿಜ್ಞಾನ, ಸಾಹಿತ್ಯ ಇತ್ಯಾದಿ ಎಲ್ಲಾ ಕ್ಷೇತ್ರಗಳಲ್ಲಿಯೂ ಈ ಪರಿಭಾಷೆಗಳ ಕೊರತೆ ಕಂಡುಬರುತ್ತದೆ. ಕೆಲವು ವೇಳೆ ಈ ಪರಿಭಾಷೆಗಳನ್ನು ಭಾಷಾಂತರಿಸಲು ಹೋಗಿ ಅರ್ಥದ ಅವಾಂತರಗಳು ಸಂಭವಿಸುವುದುಂಟು. ಗೊಂದಲಕ್ಕನುವಾಗುವುದು ಉಂಟು. ಆದ್ದರಿಂದ ಎಲ್ಲಾ ಕಡೆಗೂ ಸರ್ವಸಮಾನವಾಗಿ ರೂಢಿಯಲ್ಲಿರಬಹುದಾದ ಎಲ್ಲಿಯೋ ಕೆಲವು ಪದಗಳ ಹೊರತು ಉಳಿದೆಲ್ಲವನ್ನು ಅಂತರಾಷ್ಟ್ರೀಯವಾದ ಪರಿಭಾಷೆಯಿಂದಲೇ ವ್ಯವಹರಿಸುವುದು ಉಚಿತ'.[೬೬] ಯಂತ್ರಗಳಿಗೆ ಸಂಬಂಧಿಸಿದ ಅದೆಷ್ಟೋ ಪದಗಳು ಇಂದು ಭಾರತೀಯವಾಗಿಯೂ ಕನ್ನಡವಾಗಿಯೂ ಇವೆ. 'ವಿಜ್ಞಾನಶಾಸ್ತ್ರಗಳಲ್ಲಿರುವ ಸಾವಿರಾರು ಪಾರಿಭಾಷಿಕ ಪದಗಳನ್ನು ನಾವು ಹಾಗೆಯೇ ನಮ್ಮ ನಮ್ಮ ಲಿಪಿಗಳಲ್ಲಿ ಬರೆದು ವ್ಯವಹರಿಸಿದ್ದೇ ಆದರೆ ವಿಜ್ಞಾನ ವಿದ್ಯೆಗೂ ಕಾರ್ಯಾರಂಭದಲ್ಲಿ ಅದರ ಪ್ರಯೋಗಕ್ಕೂ ಸೌಲಭ್ಯ ಉಂಟಾಗುತ್ತದೆ. ಆದ್ದರಿಂದ ವೈಜ್ಞಾನಿಕ ಪರಿಭಾಷೆಗೆ ನಮ್ಮ ಭಾಷೆಯಲ್ಲಿ ಪರಿಭಾಷೆಗಳಿಲ್ಲ ಎಂಬ ಕೊರತೆಯೆ ಉದ್ಭವಿಸುವುದಿಲ್ಲ'.[೬೭]

ಅಡಿಟಪ್ಪಣಿಗಳು

೧.ಪು.ಸಂ. ೧೫೩, ಸಂ.೨

೨.ಪು.ಸಂ. ೭೧, ಸಂ.೩

೩. ಪು.ಸಂ. ೭೩, ಸಂ.೨

೪. ಪು.ಸಂ. ೮, ಸಂ.೩

೫. ಪು.ಸಂ. ೧೦, ಸಂ.೩

೬. ಪು.ಸಂ. ೨೨೧, ಸಂ.೨

೭. ಕನ್ನಡ ಕಾವ್ಯತತ್ವ ಚಿಂತನೆ, ಡಾ. ಜಿ.ಎಸ್.ಎಸ್. ಪು.ಸಂ.೪

೮. ಮಾತು ತಲೆ ಎತ್ತುವ ಬಗೆ, ಸಂ. ರಹಮತ್ ತರಿಕೇರೆ, ಪ್ರಸ್ತಾವನೆ, ಪು.ಸಂ. ೧೪

೯. ಪು.ಸಂ. ೧೫೨, ಸಂ.೨

೧೦. ಪು.ಸಂ. ೮೫, ಸಂ.೨

೧೧. ಪು.ಸಂ. ೩೨೫, ಸಂ.೧

೧೨. ಪು.ಸಂ. ೨೨೬, ಸಂ.೨

೧೩. ಪು.ಸಂ. ೨೨೬, ಸಂ.೩

೧೪. ಪು.ಸಂ. ೩೨೦, ಸಂ.೩

೧೫. ಪು.ಸಂ. ೨೪೨, ಸಂ.೨

೧೬. ಪು.ಸಂ. ೪೬೮, ಸಂ.೨

೧೭. ಪು.ಸಂ. ೧೮೦, ಸಂ.೧

೧೮. ಪು.ಸಂ. ೮೬, ಸಂ.೨

೧೯. ಪು.ಸಂ. ೬೮, ಸಂ.೩

೨೦. ಪು.ಸಂ. ೧೦೮, ಸಂ.೩

೨೧. ಪು.ಸಂ. ೧೦೮, ಸಂ.೩

೨೨. ಪು.ಸಂ. ೧೨೫, ಸಂ.೩

೨೩. ಪು.ಸಂ. ೯೧, ಸಂ.೩

೨೫. ಪು.ಸಂ. ೪೦೭, ಸಂ.೧

೨೬. ಪು.ಸಂ. ೪೬೫, ಸಂ.೨

೨೭. ಪು.ಸಂ. ೬೪, ಸಂ.೩

೨೮. ಪು.ಸಂ. ೬೭, ಸಂ.೩

೨೯. ಪು.ಸಂ. ೬೭, ಸಂ.೩

೩೦. ಪು.ಸಂ. ೩೭೯, ಸಂ.೩

೩೧. ಪು.ಸಂ. ೨೪೧, ಸಂ.೨

೩೨. ಪು.ಸಂ. ೨೩೫, ಸಂ.೩

೩೩. ಪು.ಸಂ. ೨೯೦, ಸಂ.೩

೩೪. ಪು.ಸಂ. ೨೯೦, ಸಂ.೩

೩೫. ಪು.ಸಂ. ೨೯೧, ಸಂ.೩

೩೬. ಪು.ಸಂ. ೨೯೧, ಸಂ.೩

೩೭. ಪು.ಸಂ. ೨೩೧, ಸಂ.೩

೩೮. ಪು.ಸಂ. ೧೭೧,೧೭೪, ಸಂ.೩

೩೯. ಪು.ಸಂ. ೨೭೨, ೨೭೪, ಸಂ.೩

೪೦. ಪು.ಸಂ. ೨೯೪, ಸಂ.೧

೪೧. ಪು.ಸಂ. ೩೯೫, ಸಂ.೧

೪೨. ಪು.ಸಂ. ೪೦೦, ಸಂ.೧

೪೩. ಪು.ಸಂ. ೪೦೩, ಸಂ.೧

೪೪. ಪು.ಸಂ. ೩೫೩, ಸಂ.೧

೪೫. ಪು.ಸಂ. ೨೯೪, ಸಂ.೧

೪೬. ಪು.ಸಂ. ೨೫೦, ಸಂ.೧

೪೭. ಪು.ಸಂ. ೨೫೯, ಸಂ.೧

೪೮. ಪು.ಸಂ. ೨೯೭, ಸಂ.೧

೪೯. ಪು.ಸಂ. ೧೭೨, ಸಂ.೧

೫೦. ಪು.ಸಂ. ೧೭೩, ಸಂ.೨

೫೧. ಪು.ಸಂ. ೨೬೪, ಸಂ.೨

೫೨. ಪು.ಸಂ. ೨೯೭, ಸಂ.೨

೫೩. ಪು.ಸಂ. ೪೪೯, ಸಂ.೨

೫೪. ಪು.ಸಂ. ೪೯, ಸಂ.೩

೫೫. ಪು.ಸಂ. ೫೩೬, ಸಂ.೨

೫೬. ಪು.ಸಂ. ೨೦೮, ಸಂ.೩

೫೭. ಪು.ಸಂ.೨೬೦, ಸಂ.೨

೫೮. ಪು.ಸಂ. ೪೦೫, ಸಂ.೨

೫೯. ಪು.ಸಂ. ೫೩೭, ಸಂ.೨

೬೦. ಪು.ಸಂ. ೫೩೭, ಸಂ.೨

೬೧. ಪು.ಸಂ. ೫೩೯, ಸಂ.೨

೬೨. ಪು.ಸಂ. ೫೪೦, ಸಂ.೨

೬೩. ಪು.ಸಂ. ೩೦೩, ಸಂ.೩

೬೪. ಪು.ಸಂ. ೨೩೩, ಸಂ.೩

೬೫. ಪು.ಸಂ. ೨೬೪, ಸಂ.೨

೬೬. ಪು.ಸಂ. ೧೧೮, ಸಂ.೩

೬೭. ಪು.ಸಂ. ೧೧೮, ಸಂ೩

## ಅಧ್ಯಾಯ : ನಾಲ್ಕು

### ೧. ಕನ್ನಡ ಅಭಿಮಾನ ಕುರಿತು

ಕರ್ನಾಟಕ ಸಾಹಿತ್ಯ ಪರಿಷತ್ (ಈಗ ಕನ್ನಡ ಸಾಹಿತ್ಯ ಪರಿಷತ್ತು) ಆರಂಭಗೊಂಡ ಆ ಮೂಲಕ ಸಾಹಿತ್ಯ ಸಮ್ಮೇಳನಗಳನ್ನು ಜರುಗಿಸುವ ಮುಖ್ಯ ಉದ್ದೇಶವೇ ನಾಡಿನಲ್ಲೆಲ್ಲಾ ಕನ್ನಡ ಅಭಿಮಾನವನ್ನು ಮೂಡಿಸುವುದೇ ಆಗಿತ್ತು. ಇಲ್ಲಿ ಕನ್ನಡವೆಂದರೆ ಕೇವಲ ಭಾಷೆ ಮಾತ್ರವಲ್ಲ. ಅದು ಏಕ ಕಾಲಕ್ಕೆ ಭಾಷೆ, ಭೂಮಿ, ಸಮಾಜ ಮತ್ತು ಸಂಸ್ಕೃತಿಗಳನ್ನು ಒಳಗೊಂಡ ಪರಿಭಾಷೆ ಎಂದು ಪರಿಭಾವಿಸಿದಾಗ ಇದು ಅರ್ಥಪೂರ್ಣವಾಗುತ್ತದೆ.[೧] ಅಭಿಮಾನ ಎಂದರೆ ಈ ಎಲ್ಲವುಗಳಲ್ಲಿನ ಬೌದ್ಧಿಕ, ಭಾವನಾತ್ಮಕ ವಿಕಾಸ ಮತ್ತು ವಿವೇಕಪೂರ್ಣವಾದ ಪ್ರಜ್ಞೆಯ ಸ್ಥಿತಿ ಅಥವಾ ಜಾಗೃತ ಸ್ಥಿತಿ ಎನ್ನಬಹುದು. ಆದರೆ ಕೆಲವು ವೇಳೆ ಈ ಜಾಗೃತ ಸ್ಥಿತಿಯೇ ವಿವೇಕವನ್ನು ಶೂನ್ಯಗೊಳಿಸುವುದುಂಟು. ಆಗ ಅದು ಅಂಧಾಭಿಮಾನವೂ ಆಗುವುದುಂಟು. ಈ ಅಧ್ಯಕ್ಷೀಯ ಭಾಷಣಗಳಲ್ಲಿ ಕನ್ನಡಾಭಿಮಾನವನ್ನು ವಿಧವಿಧವಾಗಿ ಹೇಳಿರುವುದುಂಟು. ಅದು ನುಡಿ ಬಗೆಗಿನ ಅಭಿಮಾನಗಳಿರಬಹುದು. ನಾಡಿನ ಬಗೆಗಿನ ಅಭಿಮಾನಗಳಿರಬಹುದು. ಕನ್ನಡ ಅಭಿಮಾನವನ್ನು ವಿಸ್ತರಿಸುವುದು ಮತ್ತು ಆ ಮೂಲಕ ಅಭಿಮಾನವನ್ನು ಗಟ್ಟಿಗೊಳಿಸಲು ಅವರು ಹೇಳಿದ ಅಂಶಗಳೇನು? ಎಂಬ ವಿಚಾರಗಳನ್ನು ಇಲ್ಲಿ ಗಮನಿಸಬಹುದಾಗಿದೆ.

ಕನ್ನಡದ ಅಭಿಮಾನ ಇಂದು ನಿನ್ನೆಯದಲ್ಲ. ಅದಕ್ಕೊಂದು ಇತಿಹಾಸವೇ ಇದೆ. ಕವಿರಾಜಮಾರ್ಗ, ಪಂಪನ ಕೃತಿಗಳಿಂದ ಹಿಡಿದು ಈ ವರೆಗೂ ಅದು ಹರಿದುಕೊಂಡೇ ಬರುತ್ತಿದೆ. ಏಕೀಕರಣದ ಪೂರ್ವದಲ್ಲಿನ ಈ ಸಾಹಿತ್ಯ ಸಮ್ಮೇಳನಗಳಲ್ಲಿ ಕನ್ನಡಿಗರಲ್ಲಿ ಕರ್ನಾಟಕತ್ವವನ್ನು ಮೂಡಿಸುವುದೇ ಆಗಿತ್ತು. ಹಾಗಾದರೆ ಈ ಕರ್ನಾಟಕತ್ವ ಎಂದರೇನು? 'ಕರ್ನಾಟಕತ್ವ ಎಂದರೆ ತನ್ನ ದೇಶದ ಸಂಸ್ಕೃತಿಯ ಅರಿವು ಮತ್ತು ಅದನ್ನು ಅರಿತು ಆಚರಿಸುವುದು.'[೨] ಹಾಗಾದರೆ ಕರ್ನಾಟಕದ ಯಾವ ಸಂಸ್ಕೃತಿಯನ್ನು ಆಚರಿಸಬೇಕು. ಕರ್ನಾಟಕ ಸಂಸ್ಕೃತಿ ಎನ್ನುವುದು ಒಂದೇ ಆಗಿದೆಯೇ? ಆಗಲು ಸಾಧ್ಯವೇ? ಈ ಸಂದರ್ಭದಲ್ಲಿ ಕನ್ನಡ ಕರ್ನಾಟಕತ್ವ ಇವೆಲ್ಲವುಗಳ ಮೂಲವನ್ನು ಹೆಕ್ಕುವುದರಲ್ಲಿಯೇ ಒಂದು ರೀತಿಯ ಕನ್ನಡತ್ವ ಕನ್ನಡದ ಅಭಿಮಾನ ಕೆಲಸ ಮಾಡುತ್ತಿರುತ್ತದೆ. ಆದರೆ ಅದು ಜಾಗೃತವಾಗಿರಬೇಕು. ಇಲ್ಲದಿದ್ದರೆ ಈ ಅಭಿಮಾನದ ಪೊರೆಯಿಂದ ವಾಸ್ತವದ ಕೆಲವು ಸತ್ಯಗಳು ಮುಚ್ಚಿ ಹೋಗುವ ಕೆಲವು ಸಾಧ್ಯತೆಗಳು ಉಂಟು. ಅಧ್ಯಕ್ಷರುಗಳು ಕನ್ನಡ ಅಭಿಮಾನವನ್ನು ಹೇಗೆ ವ್ಯಕ್ತಪಡಿಸಿದ್ದಾರೆ ಎನ್ನುವುದನ್ನು ಗಮನಿಸಬೇಕಾಗಿದೆ.

'ಕನ್ನಡಿಗರಲ್ಲಿ ತಮ್ಮ ಅಭಿಮಾನದ ಬಗ್ಗೆ ಅಭಿಮಾನವನ್ನು ಹುಟ್ಟಿಸಬೇಕು. ಅಭಿಮಾನ ಹುಟ್ಟಲು ನಾಡಿನಾದ್ಯಂತ ಸಾಹಿತ್ಯ ಸಮ್ಮೇಳನಗಳು ಕರ್ನಾಟಕ ಸಂಘಗಳು ಸ್ಥಾಪಿಸಿ ಆ ಮೂಲಕ ಜನರಲ್ಲಿ ಕನ್ನಡದ ಬಗ್ಗೆ, ಅದರ ಇತಿಹಾಸದ ಬಗ್ಗೆ ತಿಳಿಸಿ ಹೇಳಬೇಕು. ಸಾಹಿತ್ಯದ ಉತ್ಸವಗಳನ್ನು ನಡೆಸಬೇಕು. ಇದರಿಂದ ಜನರಲ್ಲಿ ಕನ್ನಡದ ಅರಿವು ಮೂಡಿ ಅಭಿಮಾನ ಉಂಟಾಗಲು ಕಾರಣವಾಗುತ್ತದೆ. ಇದು ಕೆಲವು ಭಾಷಣಗಳಲ್ಲಿ ಮೂಡಿಬಂದ ವಿಚಾರ. ಕನ್ನಡಿಗರಲ್ಲಿ ಒಗ್ಗಟ್ಟು ಉಂಟಾಗಬೇಕು. 'ನಾವೆಲ್ಲರೂ ಒಂದೇ ಎಂಬ ಭಾವನೆ ಇರಬೇಕು. ಒಂದು ಎಂಬ ಭಾವನೆ ಮೂಡುವುದು ಪ್ರಾಂತಾಭಿಮಾನದ ಮೂಲಕ. ಪ್ರಾಂತಾಭಿಮಾನದಿಂದ

ಕನ್ನಡದ ಏಳಿಗೆಯನ್ನು ಕಾಣಬಹುದು'.[೩] ಕನ್ನಡಿಗರಿಗೆ ತಮ್ಮ ಭಾಷೆಯಲ್ಲಿ ಅಭಿಮಾನ ಹುಟ್ಟಿಸಲು ಸಾಹಿತ್ಯ ಪರಿಷತ್ ಹೊಸ ಮಾರ್ಗಗಳನ್ನು ಹುಡುಕುತ್ತಿದೆ. 'ಕನ್ನಡಿಗರಲ್ಲಿ ಕಾವು ಸಾಲದು. ಕಾವಿನಿಂದ ಕಾವ್ಯ, ಕಾವಿನಿಂದ ಕಾರ್ಯ, ಕನ್ನಡದ ಕಣ್ಮಣಿಗಳಂತಿರುವ ದೊಡ್ಡ ದೊಡ್ಡ ನಗರಗಳನ್ನು ನೋಡಿದರೆ ಈಗ್ಗೆ ಇಪ್ಪತ್ತೈದು ವರ್ಷಗಳಿಗೂ ಈಗಿಗೂ ಏನು ಅಂತರ! ಕನ್ನಡ ಬೆಳವಣಿಗೆಯನ್ನು ಕಾಣುತ್ತಿದ್ದು ಕನ್ನಡ ನಾಡು ಒಂದಾಗುವಷ್ಟರಲ್ಲಿ ನೆರೆಹೊರೆಯವರು ಕನ್ನಡೇತರರು ಅದಕ್ಕೆ ಅಡ್ಡಿ ಹಾಕಿದರು. ಕನ್ನಡ ನಾಡಿನಲ್ಲಿ ಹಿರಿಯ ಆಸ್ತಿಯಾಗಿ ಉಳಿದಿರುವುದು ಅವರ ಕನ್ನಡ ಭಾಷೆ. ಅದನ್ನು ಉಳಿಸಿಕೊಳ್ಳಿ ಎಂದು ಕನ್ನಡಿಗರಿಗೂ ಉಳಿಸಿ ಕೊಡಿ ಎಂದು ಇತರರಿಗೂ ಪ್ರಾರ್ಥನೆ ಮಾಡಬೇಕಾಗಿದೆ. ಆದ್ದರಿಂದ ಎಲ್ಲ ಜನರು ಭಾಷಾ ಭಕ್ತಿ ಪಾರಾಣತೆಯನ್ನು ಅನುಮೋದಿಸುತ್ತಾರೆಂದು ನಂಬುತ್ತೇನೆ'.[೪] ಭಕ್ತಿ ಪುರಾಣತೆಯಾದರೆ ಅದು ಕಾರ್ಯಗತಗೊಳ್ಳುವುದಿಲ್ಲ. ಕೇವಲ ಒಂದು ವರ್ಗಕ್ಕೆ ಮಾತ್ರ ಈ ಭಕ್ತಿ ಪರಾಯಣತೆ ಮೀಸಲಾಗುತ್ತದೆಯಲ್ಲವೆ? 'ಇನ್ನೂ ಕೆಲವರು ಕನ್ನಡ ಭಾಷಾಭಿಮಾನ ಬೆಳೆಯಲು ಏನು ಮಾಡಬೇಕೆಂದರೆ 'ಕನ್ನಡ ನಾಡಿನ ಮೇಲೆ ಮಮತೆ ಬೆಳೆಯಬೇಕು. ಹೇಗೆಂದರೆ ಕನ್ನಡದ ಶ್ರೇಷ್ಠ ಕವಿಗಳು, ಲೇಖಕರು, ಸಂಗೀತ ಪಿತಾಮಹರು ಜಯಂತಿಗಳನ್ನು ನಡೆಸುವುದರ ಮೂಲಕ ಅಭಿಮಾನವನ್ನು ತಳೆಯಬಹುದು. ಹೆಚ್ಚಿಸಬಹುದು'.[೫] ಜಯಂತಿಗಳಿಂದ ಅಭಿಮಾನ ಬಿತ್ತುವುದು ಗಟ್ಟಿಗೊಳಿಸುವುದು ಅಭಿವೃದ್ಧಿಪಡಿಸುವುದು ಕೇವಲ ಬಹು ಆಡಂಬರವಾಗುವುದಿಲ್ಲವೇ? ವರ್ತಮಾನ ಪತ್ರಿಕೆಗಳು, ಮಾಸ ಪತ್ರಿಕೆಗಳಲ್ಲಿ ಕನ್ನಡದ ಅಭಿಮಾನವನ್ನು ಹುಟ್ಟಿಸುವ ಸಾಕಷ್ಟು ಕೆಲಸಗಳು ನಡೆಯಬೇಕಾಗಿದೆ. ಪುಸ್ತಕಗಳ ಪ್ರಕಟಣೆ, ವಿಮರ್ಶೆ ಈ ಕೆಲಸಗಳ ಮೂಲಕವೂ ಸಾಹಿತ್ಯಕ್ಕೆ ಅಭಿವೃದ್ಧಿಗೆ ಸಹಾಯಕವಾಗುತ್ತದೆ. 'ಕನ್ನಡ ನಾಡು ನುಡಿಯ ಬಗ್ಗೆ ಅಭಿಮಾನ ಹುಟ್ಟಿಸಲು ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣವು ದೇಶ ಭಾಷೆಯಲ್ಲಿಯೇ ಜರುಗಬೇಕಾಗಿದೆ. ಸ್ತನ್ಯಪಾನದೊಡನೆ ಕಲಿತ ಕರ್ಣಾಟಕ ಭಾಷೆಯ ಕೃಷಿಯಲ್ಲಿ ಪೂರ್ಣಾಭಿಮಾನವಿಟ್ಟು ಸತತವೂ ಆ ಭಾಷೆಯಲ್ಲಿಯೇ ನಮ್ಮ ಸಕಲ ರಾಜಕೀಯ ಸಾಮಾಜಿಕ, ಸಾಂಸಾರಿಕ ಮತ್ತು ಸ್ವೀಯ ವ್ಯವಹಾರಗಳನ್ನು ನಡೆಸಲು ತೊಡಗಬೇಕು. ಇದೇ ಕರ್ನಾಟಕದ ಭಾಷಾಭಿವೃದ್ಧಿಗೂ ಕರ್ನಾಟಕದ ಸರ್ವತೋಮುಖ ಏಳಿಗೆಗೂ ಮುಖ್ಯ ಸಾಧನ'.[೬] ಇಲ್ಲಿ ಮತ್ತೊಂದು ರೀತಿಯ ಅಭಿಮಾನ ಗಟ್ಟಿಗೊಳಿಸುವ ಮಾತುಗಳನ್ನು ಕೇಳಬಹುದು. ಅದು ಕರ್ನಾಟಕ, ಕರ್ಣಾಟಕ ಈ ಹೆಸರುಗಳು ಸ್ಥಾಪಿತವಾಗುವ ಸಮಯದಲ್ಲಿ 'ಕರ್ನಾಟಕದ ಇಂದಿನ ಒಂದು ದುಃಖವೇನು? ಕರ್ನಾಟಕ ಪ್ರಾಂತವಾದರೂ ಆ ಹೆಸರಿನಿಂದ ಅದನ್ನು ಕರೆಯುವಂತಿಲ್ಲ. ಹೆಸರಾಗಿಯೂ ಕೂಡ ಹೇಳ ಹೆಸರಿಲ್ಲ ಎಂದು ಬೇಂದ್ರೆಯವರು ಮಾರ್ಮಿಕವಾಗಿ ಹೇಳಿದ ಮಾತು ಮರ್ಮಕ್ಕೆ ಹತ್ತುವಂತೆ ದಿಟವಾಗಿ ಬಿಟ್ಟಿತು. 'ವಾಚಮರ್ಥೋನಧಾವತಿ' ಎಂಬುದನ್ನು ಸಿದ್ಧಗೊಳಿಸುವಂತೆ ಹೆಸರು ಹೋಗಲಿ ಹೆಸರಿನಲ್ಲೇನಿದೆ? ಎಂದು ವಿವೇಕ ಹೇಳುವ ಈಗಿನ ಹೆಸರೇ ಇರಲಿ ಎಂದು ಹಠತೊಟ್ಟ ಬಂಧುಗಳಿಗೆ ಅದೇ ವಿವೇಕವನ್ನು ಹೇಳಬೇಕಲ್ಲವೇ? ನಿಜವಾಗಿ ಆ ಹೆಸರಿನ ಹಠದ ಹಿಂದೆ ಒಂದು ಭೀತಿಯಿದೆ. ರಾಜನೀತಿಯಿದೆ. ಇದನ್ನು ವಿಂಗಡಿಸಿ ನೋಡಿದರೆ ಭಾವೈಕ್ಯವೆಂಬುದು ಕನ್ನಡಿಯೊಳಗಿನ ಗಂಟು. ಹೆಸರಿನ ಬದಲಾವಣೆಗಿಂತ ಮುಖ್ಯವಾಗಿ ಕನ್ನಡಿಗರನ್ನು ಒಂದುಗೂಡಿಸುವ ಶಕ್ತಿ ಯಾವುದು? ಎನ್ನುವುದನ್ನು ತಿಳಿಯುವುದು. ಕನ್ನಡ ಸಂಸ್ಕೃತಿಯ ಸ್ವರೂಪದ ಜ್ಞಾನ. ಪ್ರಜ್ಞಾಪೂರ್ವಕವಾದ ಸದಾಭಿಮಾನದಿಂದ ಪ್ರೇರಿತವಾದ ನಡೆ ನುಡಿ ಇವೇ ಕನ್ನಡಿರನ್ನು

ಒಂದುಗೂಡಿಸುವ ಶಕ್ತಿ.'[೨] ಹಾಗಾದರೆ ಈ ಕನ್ನಡ ಸಂಸ್ಕೃತಿ ಎಂದರೇನು? ಎನ್ನುವುದಕ್ಕೂ ಅವರೇ ಉತ್ತರಿಸಿದ್ದಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಕನ್ನಡ ನಾಡಿನ ಇತಿಹಾಸ ಪರಂಪರೆ ಸಾಹಿತ್ಯ ಕಲೆ ಈ ಮುಂತಾದ ಅಂಗಗಳಲ್ಲಿ ಉತ್ತಮವೆಂದು ವ್ಯಷ್ಟಿ ಸಮಷ್ಟಿಯಲ್ಲಿ ವ್ಯಕ್ತವಾಗಿರುವುದೆಲ್ಲ 'ಕನ್ನಡ ಸಂಸ್ಕೃತಿ'. ಕರ್ನಾಟಕದ ಭೂಮಿಯಲ್ಲಿ ಕನ್ನಡದ ಜನಜೀವನದಲ್ಲಿ ಅದರ ಅವಿಷ್ಕಾರವಾಗಿರುವುದೆಂದು ಅದು ಕನ್ನಡ ಸಂಸ್ಕೃತಿ. ಅದಕ್ಕೆ ಒಂದು ಸತತ ಪರಂಪರೆ ಇದೆ. ಅದರಿಂದ ಕನ್ನಡ ಮನವು ರೂಪಗೊಂಡಿದೆ. ಕನ್ನಡಿಗರ ಬಾಳು ಚೆಲುವಾಗಿದೆ ಎಂದು ಅದು ಕನ್ನಡ ಸಂಸ್ಕೃತಿ. ಇದು ಮಾನವ ಸಂಸ್ಕೃತಿಯ ಒಂದು ಪ್ರಕಾರ ಒಂದು ಅವಿಷ್ಕಾರ. ಎಲ್ಲಾ ಅಂಶಗಳಲ್ಲಿ ಅದು ಇತರ ಸಂಸ್ಕೃತಿಗಳಿಂದ ಬೇರೆಯಾಗಬೇಕಿಲ್ಲ. ಒಟ್ಟು ರೂಪದಲ್ಲಿ ಅದು ತನ್ನ ತನವನ್ನು ಪಡೆದಿದೆ. ಹೀಗೆ ಕನ್ನಡ ಸಂಸ್ಕೃತಿಯ ಒಂದು ಅಂಗವಾಗಿ ಕನ್ನಡ ಸಾಹಿತ್ಯ ಬೆಳೆಯುತ್ತಿದೆ. ಕನ್ನಡ ಬದುಕು ಅರಳುತ್ತಿದೆ. ಆದರೆ ಇದನ್ನು ಹತ್ತಿರದಿಂದ ಗಮನಿಸಿದರೆ ಅದೆಷ್ಟೋ ಕನ್ನಡ ಸಂಸ್ಕೃತಿಯ ಒಳಗೆ ತಲೆ ಇಟ್ಟುಕೊಂಡ ಮೂಲ ಸಂಸ್ಕೃತಿಗಳು ನಾಶವಾಗುತ್ತಿವೆ. ಅವುಗಳ ಬದುಕು ಕಮರಿ ಹೋಗುತ್ತಿದೆ. ಇದು ವಾಸ್ತವ. ಈ ನಿಟ್ಟಿನಲ್ಲಿ ಕನ್ನಡ ಸಂಸ್ಕೃತಿಯ ಬಗ್ಗೆ ಅಭಿಮಾನ ಹುಟ್ಟಬೇಕು. ಬೆಳೆಯಬೇಕೆಂದರೆ ಇಂತಹ ಮೂಲ ಸಂಸ್ಕೃತಿಗಳನ್ನು ಉಳಿಸುವುದರಲ್ಲಿಯೇ ಇದೆ'.[೮]

ಹೀಗೆ ಇಂತಹ ಹಲವಾರು ವಿಚಾರಗಳು ಕನ್ನಡದ ಅಭಿಮಾನವನ್ನು ಮೂಡಿಸಲು ಅಧ್ಯಕ್ಷರುಗಳು ಹೇಳಿರುವುದನ್ನು ಕಾಣಬಹುದಾಗಿದೆ. ಆದರೆ ಕೇವಲ ಕಂಠದಲ್ಲಿಯೇ ಹುಟ್ಟಿ ಅಂತ್ಯವಾಗುವ ಕೂಗು ಕನ್ನಡವನ್ನು ಬೆಳೆಸುವುದಿಲ್ಲ ಎನ್ನುವ ಪ್ರೊ. ಬರಗೂರು ರಾಮಚಂದ್ರಪ್ಪನವರ ಮಾತು ನೆನಪಾಗುತ್ತದೆ. ಹಾಗೆಂದು ಅಧ್ಯಕ್ಷರ ಹಿರಿಯರುಗಳ ಈ ಅಭಿಮಾನ ಕೇವಲ ಕೂಗು ಎಂದು ಹೇಳುತ್ತಿಲ್ಲ. ಅವರು ಮಾಡಿರುವ ಕನ್ನಡದ ಅಭಿಮಾನವನ್ನು ತಮ್ಮ ಏಳಿಗೆಯಿಂದ ಮುಂದಿನ ತಲೆಮಾರಿಗೆ ಕೊಡುವ ಒಂದು ಪರಂಪರೆಯನ್ನೇ ಸೃಷ್ಟಿ ಮಾಡಿದರು ಎನ್ನುವುದನ್ನು ಗಮನಿಸಬಹುದು. ಇಲ್ಲಿ ಕನ್ನಡಾಭಿಮಾನವೆಂದರೆ ಕೇವಲ ಹಿಂದಿನ ಅಥವಾ 'ಗತವೈಭವದ' ಕನವರಿಕೆಯಲ್ಲ. ಅದು ಸದಾ ಸಮಕಾಲೀನವಾಗಿರುತ್ತದೆ. ಇದರಲ್ಲಿಯೇ ಅದರ ಸಾರ್ಥಕ ಸಂವೇದನೆ ಎನ್ನುವುದು ಮರೆಯುವಂತಿಲ್ಲ. ಕೇವಲ ಗತವೈಭದಲ್ಲಿಯೇ ಮುಳುಗಿ ಹೋಗುವ ಮನಸ್ಸುಗಳು ಜಡವಾಗುವುದುಂಟು. ಇಂತಹ ವೈಭವೀಕರಣದಲ್ಲಿ ಕನ್ನಡಾಭಿಮಾನವಿಲ್ಲ; ಬೇಧ ಭಾವಗಳಿಲ್ಲದೆ ಅಖಂಡ ಕರ್ನಾಟಕವನ್ನು ಕಾಣುವುದು ಕನ್ನಡಾಭಿಮಾನದ ಸಂಸ್ಕೃತಿ ಪ್ರಜ್ಞೆಯಾಗಿರಬೇಕು.

**೨. ಕರ್ನಾಟಕದ ಏಕೀಕರಣ**

ನಾಡಿನ ಚರಿತ್ರೆಯಲ್ಲಿ ಏಕೀಕರಣ ಎನ್ನುವುದು ಮಹತ್ವದ ಘಟ್ಟ, ಕರ್ನಾಟಕದ ಏಕೀಕರಣವೆಂದರೆ ಕೇವಲ ಭೌಗೋಳಿಕವಾಗಿ ಏಕವಾಗುವುದಲ್ಲ. ಅದು ಭಾವ, ಭಾಷೆ, ಸಂಸ್ಕೃತಿಗಳ ಏಕತೆಯೆ ಆಗಿದೆ. ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಏಕೀಕರಣದ ಮಾತು ಹಲವು ಕಡೆ ಬರುತ್ತದೆ. ಅದನ್ನು ಅಧ್ಯಕ್ಷರುಗಳು ಯಾವ ಹಿನ್ನೆಲೆಯಲ್ಲಿ ಬಳಸಿಕೊಂಡಿದ್ದಾರೆ ಎಂಬುದನ್ನು ಗಮನಿಸಬಹುದು. ಕರ್ನಾಟಕದ ಏಕೀಕರಣ ಎಂಬುದು ಯಾವುದೇ ರಾಜಕೀಯಕ್ಕೆ ಸಂಬಂಧಿಸಿದ್ದಲ್ಲ. ಅದು ಕನ್ನಡ ಮನಸ್ಸುಗಳಿಗೆ ಸಂಬಂಧಿಸಿದ್ದು, ಆದರೆ ಸರ್ಕಾರವು ಅದಕ್ಕೊಂದು ಅಧಿಕೃತತೆ ನೀಡಿದ ಮೇಲೆ ಏಕೀಕರಣ ಎಂಬುದು ಹೊಸ ಹೊಸ

ಸ್ವರೂಪವನ್ನು ಪಡೆಯುತ್ತದೆ. ಕೆಲವರು ಭಾಷೆಯು ಅಭಿವೃದ್ಧಿಯಾಗಬೇಕೆಂದರೆ, ಸಾಹಿತ್ಯದ ಬೆಳವಣಿಗೆಯಾಗಬೇಕೆಂದರೆ ಕರ್ನಾಟಕದ ಏಕೀಕರಣ ಅವಶ್ಯಕ ಎಂಬ ವಾದವನ್ನು ಮಂಡಿಸುತ್ತಲೇ ಬಂದಿದ್ದಾರೆ.

'ಹೊಯ್ಸಳರು ಮತ್ತು ಸೇವಣರು ನಡುವಿನ ರಾಜಕೀಯ ಸೆಣಸಾಟದಲ್ಲಿ ಕರ್ನಾಟಕ ಎರಡು ಭಾಗವಾದದ್ದು ಕ್ರಿ.ಶ. ೧೩ನೇಯ ಶತಮಾನದ ಪೂರ್ವಾರ್ಧದಲ್ಲಿ. ಆಗ ಒಡೆದುಕೊಂಡ ಕನ್ನಡಿಗರು ಆಡಳಿತಾತ್ಮಕವಾಗಿ ಒಂದಾದದ್ದು ೧೯೫೬ರಲ್ಲಿ. ಸುಮಾರು ೭೫೦ ವರ್ಷಗಳ ಕಾಲ ಕನ್ನಡಿಗರೇ ಅಧಿಕವಾಗಿದ್ದ ಪ್ರದೇಶಗಳನ್ನು ಹೆಚ್ಚು ಆಳಿದವರು ಕನ್ನಡೇತರರು'.[೧೦] ಹೀಗೆ ಸೇವುಣರ ಕಾಲದಲ್ಲಿ ಒಡೆದು ಹೋದ ಕರ್ನಾಟಕ ಒಂದಾಗಲು ಹಲವು ಶತಮಾನಗಳೇ ಕಾಯಬೇಕಾಯಿತು. ಕರ್ನಾಟಕವು ೧೭೯೯ರಲ್ಲಿ ಟಿಪ್ಪು ಮರಣದ ನಂತರ ಅಂದರೆ ೪ನೇ ಆಂಗ್ಲೋ ಮೈಸೂರು ಯುದ್ದದ ನಂತರ ಬ್ರಿಟೀಷರು ಮತ್ತು ಹೈದರಾಬಾದಿನ ನಿಜಾಮನ ನಡುವೆ ಆದ ಒಪ್ಪಂದದ ಪ್ರಕಾರ ಮೈಸೂರು ಸಂಸ್ಥಾನ ಮಾತ್ರ ಮೈಸೂರು ಒಡೆಯರಿಗೆ ಉಳಿಯಿತು. ಬೆಳಗಾವಿ, ವಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಬ್ರಿಟೀಷರ ಮುಂಬೈ ಅಧಿಪತ್ಯಕ್ಕೂ ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳು ಬ್ರಿಟೀಷರ ಮದರಾಸಿನ ಅಧಿಪತ್ಯಕ್ಕೂ, ಬೀದರ್ ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಹೈದ್ರಾಬಾದಿನ ನಿಜಾಮನ ಆಳ್ವಿಕೆಗೂ ಸೇರಿತ್ತು. ಕೊಡಗು ಜಿಲ್ಲೆಯು ಬ್ರಿಟೀಷರ ಒಂದು ಅಧೀನ ರಾಜ್ಯವಾಗಿ ಉಳಿಯಿತು. ಕೆಲವು ಪ್ರದೇಶಗಳು ಸ್ಥಳೀಯ ಮರಾಠಿ ಸಂಸ್ಥಾನಿಕರ ವಶದಲ್ಲಿ ಉಳಿದವು'.[೧೧]

ಹೀಗೆ ಹಿಂದಿನ ಕರ್ನಾಟಕವು ಭಿನ್ನ ಭಿನ್ನ ಆಡಳಿತಕ್ಕೊಳಪಟ್ಟು ಅಲ್ಲೆಲ್ಲಾ ಆಳುವ ವರ್ಗದ ಭಾಷೆಯೆ ಅಧಿಕೃತವಾಗಿ ಆಡಳಿತ ಭಾಷೆಯಾಯಿತು. ಆಳುವ ವರ್ಗ ಕಡಿಮೆ ಪ್ರಮಾಣದಲ್ಲಿದ್ದರೂ ಅವರು ಕನ್ನಡವನ್ನು ಕಲಿಯಲಿಲ್ಲ. ಆದರೆ ಆಳಿಸಿಕೊಳ್ಳುವ ವರ್ಗ ಹೆಚ್ಚಿನ ಪ್ರಮಾಣದಲ್ಲಿದ್ದರೂ ಅರ್ಥವಾಗದಿದ್ದರೂ ಅವರ ಭಾಷೆಯನ್ನು ಕಲಿಯಬೇಕಿತ್ತು; ವಿಪರ್ಯಾಸವೆಂದರೆ ಇದು. ಆದ್ದರಿಂದ ಅಲ್ಲಲ್ಲಿ ಚೆದುರಿ ಹೋಗಿರುವ ಕನ್ನಡ ನಾಡು ಮತ್ತು ಕನ್ನಡಿಗರನ್ನು ಒಂದುಗೂಡಿಸುವ ಕರ್ನಾಟಕದ ಏಕೀಕರಣದ ಅವಶ್ಯವಾಗಿತ್ತು. ಆ ಮೂಲಕ ಕನ್ನಡ ಭಾಷಾಭಿವೃದ್ಧಿಯು ಸಹಾಯಕವಾಗುತ್ತದೆ. 'ಆದರೆ ಈ ವಿಷಯವು ವಿಶೇಷವಾಗಿ ರಾಜಕೀಯವಿರುವುದರಿಂದ ಈ ಬಗ್ಗೆ ನಾನು ಇಲ್ಲಿ ಹೆಚ್ಚಿಗೆ ಪ್ರಸ್ತಾಪಿಸಿರುವುದಿಲ್ಲ'[೧೨] ಎನ್ನುತ್ತಾರೆ ಫ.ಗು. ಹಳಕಟ್ಟಿಯವರು. ಈ ಏಕೀಕರಣದ ವಿಷಯವನ್ನು ಇವರು ರಾಜಕೀಯವೆಂದು ಹೇಳುತ್ತಾರೆ. ಯಾವ ರೀತಿಯ ರಾಜಕೀಯ ಇದರಲ್ಲಿ ಅಡಗಿದೆ ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ.

ಕರ್ನಾಟಕವೆಲ್ಲಾ ಒಂದಾಗಬೇಕೆಂದು ದಿಢೀರನೆ ರೂಪಗೊಂಡದ್ದಲ್ಲ ಈ ಏಕೀಕರಣ. ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಏಕೀಕರಣ ಸಂಘ, ಕನ್ನಡ ವಿದ್ಯಾವರ್ಧಕ ಸಂಘ, ಇತ್ಯಾದಿಗಳನ್ನು ಸ್ಥಾಪಿಸಿ ಆ ಮೂಲಕ ಏಕೀಕರಣಕ್ಕೊಂದು ಹೊಸ ಸ್ವರೂಪವನ್ನು ಕೊಡುತ್ತಿದ್ದರು. ಹೈದ್ರಾಬಾದ್ ಕರ್ನಾಟಕ, ನಿಜಾಮ ಕರ್ನಾಟಕ, ಬ್ರಿಟೀಷ್ ಕರ್ನಾಟಕ ಇತ್ಯಾದಿಗಳನ್ನು ಒಂದುಗೂಡಿಸಿ ಒಂದೇ ಆಡಳಿತಕ್ಕೆ ತರುವುದು ಏಕೀಕರಣದ ಮುಖ್ಯ ಅಂಶಗಳಾಗಿವೆ. ಜೊತೆಗೆ ಕನ್ನಡ ನಾಡಿನಲ್ಲೆಲ್ಲಾ ಏಕ ಭಾಷೆಯನ್ನು ಆಡಳಿತದಲ್ಲಿ ತರುವ ವಿಷಯ ಒಂದಾಗಿತ್ತು. ಹಲವು ಸಲ ಕನ್ನಡದ ರಾಜ್ಯ ಸ್ಥಾಪಿಸಿ ಕಟ್ಟಿ ಬೆಳೆಸಿದ ಕೀರ್ತಿ ಕನ್ನಡ

ರಾಜಮನೆತನಗಳಿಗೆ ಸಲ್ಲುತ್ತದೆ. ಆದರೆ ಮದರಾಸಿನ ಗೌರ್ನರ್ ಆದಂತಹ ಸರ್ ಥಾಮಸ್ ಮನ್ರೊವಿನ ಕಾಲಕ್ಕೆ ಹರಿದು ಹಂಚಿ ಅನೇಕ ಸರ್ಕಾರಗಳಲ್ಲಿ ಕೂಡಿತು. ಇದೇ ಅವನತಿಗೆ ಮೂಲ. ಅಂದಿನಿಂದ ನಮ್ಮ ಭಾಷೆ ಕೆಟ್ಟಿತು. ಇಂದಿಗೂ ಆ ಹಾನಿ ತುಂಬದಾಗಿರುತ್ತದೆ.'[೧೩]

ಹೀಗೆ ಹರಿದು ಹಂಚಿಹೋಗಿದ್ದ ಕನ್ನಡಿಗರಿಗೆ ಸರ್ಕಾರ ಯಾವುದೇ ರೀತಿಯ ಬೆಂಬಲವನ್ನು ಕೊಡುತ್ತಿರಲಿಲ್ಲ. ಅವರ ಬೇಡಿಕೆಗಳಿಗೆ ಲಕ್ಷ್ಯವನ್ನೇ ಕೊಡುತ್ತಿರಲಿಲ್ಲ. ಕನ್ನಡಿಗರು ಹೆಚ್ಚಿರುವಂತಹ ಈ ಪ್ರಾಂತ್ಯಗಳಲ್ಲಿ ಈ ರೀತಿ ನಡೆಸಿಕೊಳ್ಳುವುದು ಅಲ್ಲಿನ/ಆಗಿನ ಅಧಿಕಾರಿಗಳಿಗೆ ಸಹಜವಾಗಿದೆ. ಕರ್ನಾಟಕಕ್ಕೆ ಕಾಲೇಜು ಬೇಕೆಂದು ಕನ್ನಡಿಗರು ಬೇಡಿಕೊಂಡರೆ ಎರಡು ಲಕ್ಷ ರೂಪಾಯಿಗಳನ್ನು ನೀವು ಕೂಡಿಸಿಕೊಟ್ಟರೆ ಕೊಡುತ್ತೇವೆಂದು ಹೇಳಿದರು.[೧೪] ಇದರಿಂದ ಕನ್ನಡಿಗರ ಬಗ್ಗೆ ಅವರ ಶಿಕ್ಷಣ ಬೆಳವಣಿಗೆಗಳ ಬಗ್ಗೆ ಸರ್ಕಾರಕ್ಕಿರುವ ಧೋರಣೆಗಳು ಈ ಮೂಲಕ ತಿಳಿಯುತ್ತವೆ. ಕರ್ನಾಟಕದೊಳಗೆ ಆಕಾಶವಾಣಿ ಪ್ರಸಾರಣೆಯಲ್ಲಿ ಯುದ್ಧದ ಸುದ್ದಿಗಳನ್ನು ಕನ್ನಡದಲ್ಲಿಯೇ ಕೇಳಬೇಕೆಂಬುದು ಕನ್ನಡಿಗರ ಬಯಕೆ. ಅದಕ್ಕೆ ಮುಂಬೈ ಇಲಾಖೆಯ ಗೌರ್ನರ್ ಯುದ್ಧ ನಿಧಿಗಾಗಿ ಬೆಳಗಾವಿ ಧಾರವಾಡ ಕಡೆಗಳಲ್ಲಿ ಬಂದಾಗ ಕರ್ನಾಟಕ ಹೆಸರಿನಿಂದ ವಿಮಾನಗಳನ್ನು ತೆಗೆದುಕೊಳ್ಳಲು ಹಣದ ಅವಶ್ಯಕತೆ ಇರುತ್ತದೆ ಎಂದು ಬೇಡಿದಾಗ ಕನ್ನಡಿಗರು ತಕ್ಕ ಮಟ್ಟಿಗೆ ಸಹಾಯವನ್ನು ಮಾಡಿದರು. ಆದರೆ ಅವರ ಮನೋರಥ ಮಾತ್ರ ಈಡೇರಲಿಲ್ಲ. ಇಂತಹ ಹಲವು ವಿಚಾರಗಳಲ್ಲಿ ಕನ್ನಡ ಮತ್ತು ಕನ್ನಡಿಗರಿಗೆ ಅನೇಕ ತೊಂದರೆಗಳಾಗುತ್ತಿದ್ದವು. ಇಂತಹ ತೊಂದರೆಗಳನ್ನು ನಿವಾರಿಸಿಕೊಳ್ಳಲು ಕರ್ನಾಟಕ ಒಂದಾಗಬೇಕಿತ್ತು.

ಈ ಸಂದರ್ಭದಲ್ಲಿ ಭಾರತದಲ್ಲಿ ಈ ಏಕೀಕರಣದ ಕಾವು ಇತರ ರಾಜ್ಯಗಳಿಗೂ ತಟ್ಟಿದೇ ಅವುಗಳಲ್ಲಿ ಐಕ್ಯ ಕೇರಳ ಚಳುವಳಿಯೂ ಒಂದು. ಇವರ ಉದ್ದೇಶ ಅಖಂಡ ಕೇರಳ ಏರ್ಪಡಬೇಕು. ಅದಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊಡಗು ಮತ್ತು ನೀಲಗಿರಿಯು ಸೇರಬೇಕೆಂದು ವಾದವೆದ್ದಿದೆ. ಈ ಮೂರು ಹಿಂದೆ ಕೇರಳಕ್ಕೆ ಸೇರಿದ್ದುವಂತೆ. ಆದ ಕಾರಣ ಈಗ ಮತ್ತೆ ಕೇರಳ ಪ್ರಾಂತಕ್ಕೆ ಸೇರಬೇಕು. ಕೇವಲ ಭಾಷಾವಾರು ಆಧಾರದ ಮೇಲೆ ಮಾತ್ರ ಪ್ರತ್ಯೇಕ ಪ್ರಾಂತ್ಯಗಳನ್ನು ರಚಿಸಬಾರದು. ಸಂಸ್ಕೃತಿಯ ದೃಷ್ಟಿ ಮುಂತಾದವು ಪರ್ಯಾಲೋಚನೆಗೆ ಬರಬೇಕೆಂಬುದು ಇವರ ಮುಖ್ಯ ಉದ್ದೇಶ. ಹಾಗಾದರೆ ಈ ಮಾತನ್ನು ಅನುಸರಿಸುವುದಾದರೆ ಟಿಪ್ಪುವಿನ ಕಾಲಕ್ಕೆ ಮೈಸೂರು ರಾಜ್ಯಕ್ಕೆ ಸೇರಿದ ಕೇರಳ ಭಾಗಗಳು, ಹಿಂದೆ ಕಾವೇರಿಯಿಂದ ಗೋದಾವರಿಯವರೆಗಿನ ಕನ್ನಡದ ಮೇರೆಗಳು, ಆಂಧ್ರದ ಸೀಮೆಯ ಭಾಗಗಳು ಕಲ್ಹಣನ ಗ್ರಂಥಗಳ ಮೂಲಕ ತಿಳಿಯುವಂತೆ ಕನ್ನಡಿಗರ ಪ್ರಭಾವ ಕಾಶ್ಮೀರ, ರೀವಾ ಮುಂತಾದ ಸ್ಥಾನಗಳ ಮೇಲೆ ಅವುಗಳನ್ನು ಕನ್ನಡ ನಾಡಿಗೆ ಸೇರಿಸಬಹುದಲ್ಲ? ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ರಾಜ್ಯಾಡಳಿತದ ಶಿಸ್ತಿನ ಪ್ರಭಾವ ಮಹಾರಾಷ್ಟ್ರ, ರಾಜಪುತ್ರ ಸ್ಥಾನವು ಸೇರಿದ್ದವು. ಹಾಗಾದರೆ ಸಂಸ್ಕೃತಿಯ ದೃಷ್ಟಿಯಿಂದ ಇವುಗಳನ್ನು ಕನ್ನಡ ನಾಡಿಗೆ ಸೇರ್ಪಡಿಸಬಹುದಲ್ಲ?[೧೫] ಎಂದು ಪ್ರಶ್ನಿಸುತ್ತಾರೆ ಸಿ.ಕೆ. ವೆಂಕಟರಾಮಯ್ಯನವರು. ಇಂತಹ ಎಲ್ಲಾ ಪ್ರಶ್ನೆಗಳನ್ನು ಪ್ರರ್ಯಾಲೋಚಿಸಿ ನಾಡಿನ ಏಕೀಕರಣದ ಜೊತೆಗೆ ಸಾಂಸ್ಕೃತಿಕ ಏಕೀಕರಣದ ಪ್ರಯತ್ನ ಮುನ್ನಡೆಸುವ ಪ್ರಯತ್ನ ನಿಲ್ಲಲಾರದು ಎಂಬುದು ಅಂದಿನ ಬಹತೇಕ ಕನ್ನಡ ಏಕೀಕರಣದ ಹೋರಾಟಗಾರರ ನಿಲುವಾಗಿತ್ತು. ಹೀಗೆ ಕನ್ನಡ ನಾಡು ಒಂದಾಗುವವರೆಗೂ ನಮ್ಮ ಆಶಯಗಳು ಬರಿ

ಕನಸಾಗಿಯೇ ಉಳಿಯುತ್ತವೆ. ಕರ್ನಾಟಕ ಪ್ರಾಂತ ರಚನೆಯು ಮುಂಬೈ ಜಿಲ್ಲೆಗಳು ಕೊಡಗನ್ನು ಒಂದುಗೂಡಿಸಿ ಪ್ರತ್ಯೇಕ ಪ್ರಾಂತವನ್ನು ಮಾರ್ಪಡಿಸಬೇಕು ಎಂಬಂತೆ ರೂಪಗೊಂಡಿತ್ತು. ಆದರೆ ಕರ್ನಾಟಕ ಪ್ರಾಂತಗಳ ಒಗ್ಗೂಡುವಿಕೆ ಮಾತ್ರವಲ್ಲ ಮೈಸೂರು ಸಂಸ್ಥಾನಗಳನ್ನೊಳಗೊಂಡು ಅಖಂಡ ಕರ್ನಾಟಕ ನಿರ್ಮಾಣವೇ ಏಕೀಕರಣದ ಮೂಲ ಉದ್ದೇಶಗಳಲ್ಲಿ ಒಂದಾಗಿತ್ತು.

ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ನಾಡು ನುಡಿ ಸುಮಾರು ೨೦ ಆಡಳಿತಗಳಿಗೆ ಒಳಪಟ್ಟಿದ್ದಿತು. ನಂತರ ಮುಂಬೈ, ಮದರಾಸು, ಹೈದ್ರಾಬಾದ್, ಕೊಡಗು, ಮೈಸೂರು ಹೀಗೆ ೫ ಆಡಳಿತಕ್ಕೆ ಒಳಪಟ್ಟಿತ್ತು. ಈ ಆಡಳಿತಗಳಲ್ಲಿ ಸೇರಿ ಹೋಗಿರುವ ಕರ್ನಾಟಕವನ್ನು ಒಟ್ಟಾಗಿಸಿ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸಬೇಕಾಗಿತ್ತು. ಶೈಕ್ಷಣಿಕ ಸಮಸ್ಯೆ, ಅಲ್ಪಸಂಖ್ಯಾತರಾದ ಕನ್ನಡಿಗರಿಗೆ ಅವಕಾಶಗಳು, ಗಡಿನಾಡಿನ ಸಮಸ್ಯೆಗಳು ಹೀಗೆ ಹಲವಾರು ಸಮಸ್ಯೆಗಳು ಕರ್ನಾಟಕ ಏಕೀಕರಣ ವಾಗದ ಹೊರತು ಬಗೆ ಹರಿಯುವುದಿಲ್ಲವೆಂದು ಪರಿಗಣಿಸಲಾಗಿತ್ತು. ಆದರೂ ಈ ಸಮಸ್ಯೆಗಳು ಇಂದಿಗೂ ಹಾಗೆಯೇ ಮುಂದುವರೆದುಕೊಂಡು ಹೋಗುತ್ತಿವೆ. ಕರ್ನಾಟಕ ಏಕೀಕರಣದಿಂದ ಸಾಂಸ್ಕೃತಿಕ ಸಂಪರ್ಕವು ತೀರಾ ಅವಶ್ಯವಾಗಿದೆ.[೧೬] ಏಕೆಂದರೆ ಕರ್ನಾಟಕದ ಬೇರೆ ಬೇರೆ ಭಾಗದ ಜನರು ಒಂದೆಡೆಗೆ ಕೂಡಲು ಸಂಪರ್ಕ ತೀರ ಕಡಿಮೆ. ಕರ್ನಾಟಕದ ಏಕೀಕರಣದಿಂದಾಗಿ ಮುಂಬೈ ಕರ್ನಾಟಕದವರೆಗೂ, ಮಂಗಳೂರಿನವರೆಗೂ, ಹೈದರಾಬಾದ್ ಕರ್ನಾಟಕದವರೆಗೂ, ಮೈಸೂರಿನವರೆಗೂ ಸಂಪರ್ಕವೇರ್ಪಟ್ಟು ಸಾಂಸ್ಕೃತಿಕ ವಾತಾವರಣ ನಿರ್ಮಾಣ ಗೊಳ್ಳುವುದರಲ್ಲಿ ಸಂಶಯವಿಲ್ಲ. ಸಾಂಸ್ಕೃತಿಕ ಸಂಪರ್ಕದಿಂದ ನಾಡಿನ ಎಲ್ಲಾ ಭಾಗದ ಜನರು ಒಂದೇ ಎನ್ನುವ ಕನ್ನಡಿಗ ಕನ್ನಡತ್ವ ಮನೋಭಾವವುಳ್ಳವರು ರೂಪುಗೊಳ್ಳುವುದಕ್ಕೆ ಕಾರಣವಾಗುತ್ತದೆ.

'ಕರ್ನಾಟಕದ ಏಕೀಕರಣ ಸಾಹಿತ್ಯದ ಕಾರ್ಯವಲ್ಲ. ಅದು ಅದರ ಕಾರಣ ಪರಿಣಾಮ ಸಿದ್ಧಿ'[೧೭] ಹೀಗೆ ಅಧ್ಯಕ್ಷರು ತಮ್ಮ ಭಾಷಣಗಳಲ್ಲಿ ಏಕೀಕರಣದ ಅಗತ್ಯತೆಯನ್ನು ಆ ಮೂಲಕ ಭಾಷೆ, ಸಾಹಿತ್ಯಗಳ ಪಾತ್ರ ಪ್ರಮುಖವಾದುದು ಎಂಬ ಅಂಶಗಳನ್ನು ಪ್ರಸ್ತುತಪಡಿಸಿದ್ದಾರೆ.

ಅಡಿಟಿಪ್ಪಣಿಗಳು

೧. ಪು.ಸಂ. ೪೧, ಕನ್ನಡ ಪ್ರಜ್ಞೆ

೨. ಪು.ಸಂ. ೨೧೨, ಸಂ.೧

೩. ಪು.ಸಂ. ೧೭೮, ಸಂ.೨

೪. ಪು.ಸಂ. ೨೧೨, ಸಂ.೨

೫. ಪು.ಸಂ. ೨೯೮, ಸಂ.೨

೬. ಪು.ಸಂ. ೭೮, ಸಂ.೧

೭. ಪು.ಸಂ. ೩೨೦, ೩೨೧, ಸಂ.೩

೮. ಪು.ಸಂ. ೩೨೧, ಸಂ.೩

೯. ಪು.ಸಂ. ೩೫, ಕನ್ನಡ ಪ್ರಜ್ಞೆ

೧೦. ಪು.ಸಂ. ೧೦೭, ಗೋಪಾಲರಾವ್

೧೧. ಪು.ಸಂ. ೧೦೭, ಗೋಪಾಲರಾವ್

೧೨. ಪು.ಸಂ. ೨೨೨, ಸಂ.೧

೧೩. ಪು.ಸಂ. ೧೬೨, ಸಂ.೨

೧೪. ಪು.ಸಂ. ೧೬೨, ಸಂ.೨

೧೫. ಪು.ಸಂ. ೩೧೪, ಸಂ.೨

೧೬. ಪು.ಸಂ. ೫೨೬, ಸಂ.೨

೧೭. ಪು.ಸಂ. ೨೨೭, ಸಂ.೨

## ಅಧ್ಯಾಯ : ಐದು

## ಚರಿತ್ರೆ, ಶಿಕ್ಷಣ ಮತ್ತು ಪತ್ರಿಕೆಗಳ ಕುರಿತು ಚಿಂತನೆ

### ಚರಿತ್ರೆಯನ್ನು ಕುರಿತು

ಅಧ್ಯಕ್ಷೀಯ ಭಾಷಣಗಳಲ್ಲಿ ಇದುವರೆಗೂ ಬಂದ ವಿಷಯಗಳಂತೆ ಚರಿತ್ರೆ ಅಥವಾ ಇತಿಹಾಸದ ಬಗ್ಗೆಯೂ ವಿವಿದೆಡೆಗಳಲ್ಲಿ ಪ್ರಸ್ತಾಪ ಮಾಡಿದ್ದಾರೆ. ಅದು ನಾಡಿನ ಚರಿತ್ರೆಯಾಗಬಹುದು ಅಥವಾ ನುಡಿಯ ಚರಿತ್ರೆಯಾಗಬಹುದು. ಈ ಸಂದರ್ಭದಲ್ಲಿ ಚರಿತ್ರೆಯನ್ನು ತಿಳಿಸಲು ಯಾವ ರೀತಿಯ ಮಾನದಂಡಗಳನ್ನು/ಯಾವ ಆಕರಗಳ ಆಧಾರದ ಮೇಲೆ ಚರಿತ್ರೆಯನ್ನು ಗುರುತಿಸಿದ್ದಾರೆ ಎಂದು ಈ ಭಾಗದಲ್ಲಿ ತಿಳಿಯುವುದಾಗಿದೆ. ಹಿಂದಿನ ಇತಿಹಾಸವನ್ನು ಸರಿಯಾಗಿ ಅರ್ಥ ಮಾಡಿಕೊಂಡವನು ವರ್ತಮಾನವನ್ನು/ಇಂದಿನ ಇತಿಹಾಸವನ್ನು ಕಟ್ಟಬಲ್ಲ ಎಂಬಂತೆ ಈ ಅಧ್ಯಕ್ಷರುಗಳು ಗತಕಾಲದ ಇತಿಹಾಸವನ್ನು ಹೇಗೆ ಅರ್ಥೈಸಿಕೊಂಡಿದ್ದಾರೆ, ಆ ಮೂಲಕ ವರ್ತಮಾನದ ಸವಾಲುಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದನ್ನು ತಿಳಿಯಬಹುದು. ಹಾಗೆಯೇ ಇತಿಹಾಸಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧವನ್ನು ಗುರ್ತಿಸಬಹುದಾಗಿದೆ.

ನಾಡಿನ ಚರಿತ್ರೆಯನ್ನು ಕಟ್ಟುವಲ್ಲಿ ಮುಖ್ಯವಾದ ಆಧಾರಗಳು ಸಾಹಿತ್ಯ ಕೃತಿಗಳು (ದೇಶ ಮತ್ತು ವಿದೇಶ) ಶಾಸನಗಳು, ನಾಣ್ಯಗಳು, ಸ್ಮಾರಕಗಳು ಮತ್ತು ಭೂ ಉತ್ಖನನಗಳು, ಶಿಲ್ಪಕಲೆಗಳು ಇತ್ಯಾದಿಗಳಿಂದ ಚರಿತ್ರೆಯನ್ನು ತಿಳಿಯಲು ಆಧಾರಗಳನ್ನು ಬಳಸಿಕೊಳ್ಳಲಾಗುತ್ತಿದೆ. ಕನ್ನಡ ರಾಜ್ಯದಲ್ಲಿ ಆಳ್ವಿಕೆ ನಡೆಸಿದ ರಾಜರುಗಳು ಮತ್ತು ಮಾಂಡಲಿಕರು ಪ್ರೋತ್ಸಾಹ ಕೊಡುವುದರ ಮೂಲಕ ಸಾಹಿತ್ಯವನ್ನು ಪೋಷಿಸುತ್ತಿದ್ದರು. ಗಂಗರು ರಾಷ್ಟ್ರಕೂಟರು, ಚಾಳುಕ್ಯರು, ಕಲಚೂರ್ಯರು, ಕಾಕತೀಯರು, ಹೊಯ್ಸಳರು, ವೆಂಗಿಯ ಅರಸರು ಅಥವಾ ಪೂರ್ವ ದೇಶದ ಚಾಲುಕ್ಯರು ಸೌಂದತ್ತಿಯ ರಟ್ಟರು ಕರಹಾಟದ ಶಿಲಾಹಾರರು ಸಾಂತರರು, ಕೊಂಗಾಳ್ವರು, ಚೊಂಗಾಳ್ವರು, ತುಳು ದೇಶದ ಅರಸರು, ಕೊಡಗು ಅರಸರು, ಚೌಟರು, ವಿಜಯನಗರದ ಅರಸರು, ಮೈಸೂರಿನ ಅರಸರು, ಪಾಳೆಗಾರರು ಹೀಗೆ ಕರ್ನಾಟಕವನ್ನಾಳಿದ ಅರಸರಾದಿಯಿಂದ ಹಿಡಿದು ಪಾಳೆಗಾರರವರೆಗೆ ಮಾಹಿತಿಗಳು ಆಯಾ ಕಾಲದ ಸಾಹಿತ್ಯ ಕೃತಿಗಳ ಮೂಲಕ ಶಾಸನಗಳ ಮೂಲಕ ಇತ್ಯಾದಿಗಳಿಂದ ಅರ್ಥೈಸಲಾಗುತ್ತದೆ. ರಾಜರ ಆಸ್ಥಾನ ಆಶ್ರಯದಲ್ಲಿ ರಚಿಸಿದಂತಹ ಕೃತಿಗಳು ಮಾತ್ರ ಇಂದು ಲಭ್ಯವಾಗಿದೆ. ಕೆಲವು ಮಾತ್ರ ಅಂದರೆ ಆ ಕಾಲದಲ್ಲಿ ಉಳಿದವರು ಕೃತಿ ರಚನೆ/ ಸಾಹಿತ್ಯ ರಚನೆಯಲ್ಲಿ ತೊಡಗಿರಲಿಲ್ಲವೇ? ತೊಡಗಿದ್ದರೂ ಒಂದು ವೇಳೆ ಅವುಗಳಿಗೆ ಮಾನ್ಯತೆ ದೊರಕಿರಲಿಲ್ಲವೇ ಎಂಬ ಪ್ರಶ್ನೆ ಉಂಟಾಗುತ್ತದೆ. ದೊರೆತ ಎಲ್ಲಾ (ಭಾಗಶಃ) ಸಾಹಿತ್ಯ ಕೃತಿಗಳು ಚರಿತ್ರೆಯನ್ನು ಕಟ್ಟಲು ಅನುಕೂಲವಾಗಿಯೆ ಇವೆ. ಸಾಹಿತ್ಯ ತನ್ನ ಕಾಲದ ಎಲ್ಲಾ ಅಂಶಗಳನ್ನಲ್ಲದಿದ್ದರೂ ಮುಖ್ಯ ಅಂಶಗಳನ್ನಾದರೂ ಪ್ರಕಟಪಡಿಸುತ್ತಿರುತ್ತದೆ. ಇನ್ನು ಶಾಸನಗಳು ಸ್ಮಾರಕಗಳು ಶಿಲ್ಪಕಲೆಗಳು ಇತ್ಯಾದಿಗಳು ಸಹ ಅವರ ಹೆಗ್ಗಳಿಕೆಗೆ ಹಿಡಿದ ಕನ್ನಡಿಗಳಂತಿವೆ. ಹೀಗೆ ಚರಿತ್ರೆ / ಇತಿಹಾಸವೆಂದರೆ ರಾಜ ಮಹಾರಾಜರ ವೈಭವದ ಪರಾಕ್ರಮದ ಪೌರುಷದ, ಯುದ್ಧಗಳ, ಗೆಲುವು–ಸೋಲುಗಳ ಮಾಹಿತಿ ವಿವರಣೆ ಮಾತ್ರವೇ. ಇಲ್ಲಿ ಪ್ರಜೆಗಳ ಪಾತ್ರವೇನು? ಇವರ ಚರಿತ್ರೆಯನ್ನು ಯಾರೂ ಕಟ್ಟಿಲ್ಲ. ರಾಜ ಮಹಾರಾಜರು ನಾಡಿನ ಒಂದು ಭಾಗವಾದರೆ ಮುಕ್ಕಾಲು

ಭಾಗ ಪ್ರಜಾ ಸಮೂಹದಿಂದ ಕೂಡಿರುತ್ತದೆ. ಈ ಸಂದರ್ಭದಲ್ಲಿ ನಮ್ಮ ನಾಡಿನ ಚರಿತ್ರೆ /ಇತಿಹಾಸದಲ್ಲಿ ಸಾಮಾನ್ಯ ವರ್ಗದವರು ಶೂನ್ಯವೇ? ನಿಜವಾಗಿಯೂ ಚರಿತ್ರೆಯ ನಿರ್ಮಾಣಕಾರರು ಪ್ರಜೆಗಳೇ. ಅಂತದ್ದರಲ್ಲಿ ಚರಿತ್ರೆಯ ಪುಟಗಳಲ್ಲಿ ಅವರಿಗೆ ಸ್ಥಾನವೇ ಇಲ್ಲ. ಇಲ್ಲಿ ಅವರನ್ನು ಗೌಣವಾಗಿಸಿದ್ದಾರೆ. ಇಂಥ ಚರಿತ್ರೆಯನ್ನು ಸರಿಯಾಗಿ ಓದಿಕೊಂಡು ವರ್ತಮಾನವನ್ನು ಚರಿತ್ರೆಯನ್ನಾಗಿಸುವುದು ಕೂಡ ಹೀಗೆ ತಾನೇ? ನಮ್ಮ ನಾಡಿನ ಚರಿತ್ರೆಯನ್ನು ವ್ಯವಸ್ಥಿತವಾಗಿ ರಚಿಸಲು ಸಾಧ್ಯವಾಗಿಲ್ಲ. ಎಳೆಯ ವಯಸ್ಸಿನಲ್ಲಿ ಮಕ್ಕಳಿಗೆ ಚರಿತ್ರೆಯ ಪಾಠವನ್ನು ಹೇಳುವಾಗ ಚರಿತ್ರೆಯ ಕುರೂಪಗಳನ್ನು ತಿಳಿಸಬಾರದು. ಅದರಲ್ಲಿರುವ ವಿಶೇಷತೆಯನ್ನು ಶ್ರೇಷ್ಠತೆಯನ್ನು ಮಾತ್ರ ಹೇಳಿ/ಕಲಿಸಿ ಅವರಿಗೆ ನಾಡಿನ ಬಗ್ಗೆ ಹಿಂದಣವರ ಬಗ್ಗೆ ಹೆಮ್ಮೆ ಅಭಿಮಾನಪಡುವಂತೆ ತಿಳಿಸಿ ಹೇಳಬೇಕು. ನಮ್ಮ ದೇಶದ ಚರಿತ್ರೆಯನ್ನು ಅನ್ಯದೇಶೀಯರು ತಮಗೆ ತೋರಿದಂತೆಯೂ ತಮ್ಮ ಮೂಗಿನ ನೇರಕ್ಕೆ ಸರಿಯಾಗಿಯೂ ತಮ್ಮ ಭಾಷೆಯಲ್ಲಿ ರಚಿಸಿರುವರು. ಅವುಗಳನ್ನು ಬಿಟ್ಟರೆ ನಮಗೆ ಬೇರೆ ಗತಿ ಇಲ್ಲ. ನಮ್ಮವರಾರು ದೇಶ ಭಾಷೆಯಲ್ಲಿ ಬರೆಯಲು ತೊಡಗಿಲ್ಲ. ಬರೆಯುವವರಿದ್ದರೆ ಅವರಿಗೆ ಪ್ರೋತ್ಸಾಹವಿಲ್ಲ. ಹೀಗಿರಲು ನಮ್ಮ ಹುಡುಗರಿಗೆ ನಮ್ಮ ದೇಶದ ಚರಿತ್ರೆಯು ತಿಳಿಯದೆಂದು ಹೇಳಿದ್ದಾರೆ. ಅದು ನಮ್ಮ ತಪ್ಪೋ? ಹುಡುಗರ ತಪ್ಪೋ?[1] ಅಲ್ಲಲ್ಲಿ ಚದುರಿ ಹೋಗಿ ಸಿಕ್ಕುವ ಮಾಹಿತಿಗಳ ಆಧಾರದ ಮೇಲೆಯೇ ಚರಿತ್ರೆಯನ್ನು ರಚಿಸಿದ್ದಾರೆ ಎಂಬುದು ಮರೆಯುವಂತಿಲ್ಲ. ಭಾರತೀಯರಲ್ಲಿ ಐತಿಹಾಸಿಕ ಪ್ರಜ್ಞೆಯ ಕೊರತೆಯಿಂದಾಗಿ ನಾಡಿನ/ದೇಶದ ಇತಿಹಾಸ ಅಥವಾ ಚರಿತ್ರೆ ಸರಿಯಾಗಿ ರಚಿಸಿಲ್ಲವೆಂದೇ ಹೇಳಬಹುದು. ಪುರಾಣಗಳನ್ನು ರಚಿಸುವಷ್ಟು ಆಸಕ್ತಿ ಚರಿತ್ರೆಯನ್ನು/ಇತಿಹಾಸವನ್ನು ರಚಿಸುವುದರಲ್ಲಿಲ್ಲವೆಂದೇ ಹೇಳಬಹುದು. ಶಾಸನಗಳಲ್ಲಿ ಚರಿತ್ರೆಗೆ ಸಂಬಂಧಪಟ್ಟ ವಿಷಯಗಳು ದೊರೆಯುತ್ತವೆ. ಈ ಸಂದರ್ಭದಲ್ಲಿ ರೈಸ್ ಸಾಹೇಬರ ಕಾರ್ಯವನ್ನು ನೆನೆಯಬಹುದು. ಶಾಸನಗಳ ಲಿಪಿಯನ್ನು ಅರ್ಥಮಾಡಿಕೊಂಡು ಶಾಸನಗಳನ್ನೆಲ್ಲಾ ವಿಮರ್ಶಿಸಿ ಶಾಸನ ಜಾಲದಲ್ಲಿ ಚರಿತ್ರೆಯ ಅಂಶವನ್ನು ಹುಡುಕಿ ಕರ್ಣಾಟಕ ಕವಿಚರಿತೆ ಗ್ರಂಥವನ್ನು ರಚಿಸಿದ್ದ ಆರ್. ನರಸಿಂಹಚಾರ್ಯರು ಅಷ್ಟೆ ಕೃತಕೃತ್ಯರಾಗಿದ್ದಾರೆ.[2]

ಶಾಸನಗಳಲ್ಲಿಯ ಭಾಷೆಯ ಆರಂಭಿಕ ಹಂತಗಳನ್ನು ಗುರುತಿಸಲಾಗುತ್ತದೆ. ಚರಿತ್ರೆಯನ್ನು ಬರೆಯಲು ವಿಶಾಲವಾದ ಜ್ಞಾನವಿರಬೇಕಾಗುತ್ತದೆ. ಚರಿತ್ರೆ ಎಂದರೆ ಕೇವಲ ಗತ ಕಾಲದಲ್ಲಿ ನಡೆದದ್ದು ಮಾತ್ರವಲ್ಲ. ಇಂದಿನ ವಾಸ್ತವ/ವರ್ತಮಾನ ಕೂಡ ನಾಳಿನ ಚರಿತ್ರೆಯೆ. 'ನಾನಾ ಜನಾಂಗಗಳು ಸ್ವಾತಂತ್ರ್ಯಕ್ಕಾಗಿ ಉಚ್ರಾಯಕ್ಕಾಗಿ ಸಮಾಜ ಸಂಸ್ಕಾರಕ್ಕಾಗಿ ಭಾಷಾಭ್ಯುದಯಕ್ಕಾಗಿ ನಡೆಸಿದ ಹೋರಾಟಗಳು ಪಟ್ಟ ಶ್ರಮಗಳು ಹಿಡಿದ ಉಪಾಯಗಳು ಸಾಧಿಸಿದ ಆಕಾಂಕ್ಷೆಗಳು ಮುಂದಿನವರೆಗೆ ತಿಳಿಯಬೇಕೆಂದರೆ ಇಂದಿನ ವರ್ತಮಾನವನ್ನು ಬರೆದಿಡುವುದನ್ನು ಕಲಿಯಬೇಕು. ಚರಿತ್ರೆಯು ಪ್ರತ್ಯಕ್ಷ ಕಾವ್ಯ'[3] ಸಾಹಿತ್ಯ ದೃಷ್ಟಿಯಿಂದಲೂ ಚರಿತ್ರೆ ಅವಶ್ಯವಾಗಿವೆ. ಆ ಚರಿತ್ರೆಯಿಂದ ನಮ್ಮ ಜನರಲ್ಲಿ ಹೊಸ ಹುರುಪು, ಹೊಸ ವಿಚಾರ, ಬುದ್ಧಿಗಳು ಉಂಟಾಗುತ್ತದೆ. ಹಿಂದಣದ ತಪ್ಪಿನಿಂದಾದ ಪರಿಣಾಮಗಳನ್ನು ತಿದ್ದಿಕೊಳ್ಳಲು ಮತ್ತು ಆ ಮೂಲಕ ತಪ್ಪುಗಳು ನಡೆಯದಂತೆ ಮುಂಜಾಗ್ರತೆಯನ್ನು ವಹಿಸಬಹುದಾಗಿದೆ. ಆದರೆ ಈಗ ಚರಿತ್ರೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡ ವ್ಯಕ್ತಿ, ಸಮಾಜ, ರಾಷ್ಟ್ರ ಮಾಡುತ್ತಿರುವುದೇನು? ಚರಿತ್ರೆಯನ್ನು ಎಲ್ಲರೂ ಒಂದೇ ರೀತಿಯಲ್ಲಿ ಹೇಳಿರುವುದನ್ನು ಸಾ. ಸ. ಅ. ಭಾಷಣಗಳಲ್ಲಿ ಕಂಡುಬಂದಿದೆ. ಯಾವುದೇ ವಿಷಯವನ್ನು

ಹೊಸ ನಿಟ್ಟಿನಲ್ಲಿ ಆಲೋಚಿಸಿ ಹೇಳಿದಾಗ ಅದನ್ನು ವಿವಿಧ ಮಗ್ಗಲುಗಳಿಂದ ನೋಡುವ ಕ್ರಮವೊಂದು ಬೆಳೆದು ಬರುತ್ತದೆ. ಹಾಗೆಂದು ಇರುವ ವಿಷಯಕ್ಕೆ ಇಲ್ಲದ್ದನ್ನು ಸೇರಿಸಿ ಹೇಳುವುದೆಂದಲ್ಲ. ಸಾಹಿತ್ಯ ಚರಿತ್ರೆಯನ್ನು ಹೇಳುವಾಗ ಅಲ್ಲಿಯೂ ಒಂದು ರೀತಿಯ ಪರಂಪರೆಯೇ ಬೆಳೆದು ಬಂದಿದೆ.

ಶಿಕ್ಷಣದಿಂದ ಮಾನವನ ಭಾವ/ಬೌದ್ಧಿಕ ವಿಕಾಸವಾಗಬೇಕು. ಜ್ಞಾನದ ದಿಗಂತಗಳನ್ನು ವಿಸ್ತರಿಸುತ್ತಾ ಹೋಗಬೇಕು. ಹೀಗಾಗುವುದಕ್ಕೆ ಸಮರ್ಥವಾದ ಭಾಷೆ ಸಾಹಿತ್ಯ ವಿಜ್ಞಾನ ಇತ್ಯಾದಿ ಅಂಶಗಳು ತುಂಬಾ ಅವಶ್ಯಕವೆನಿಸುತ್ತದೆ. ಈ ಎಲ್ಲಾ ವಿಷಯಗಳು ಕಲಿಯಲು / ಅಭ್ಯಾಸ ಮಾಡಲು ಮಾತೃಭಾಷೆಯಿಂದ ಮಾತ್ರ ಸಾಧ್ಯವಲ್ಲದೆ ಪರಭಾಷೆಯಿಂದ ಸಾಧ್ಯವಿಲ್ಲ ಎಂಬುದು ಸರ್ವ ವಿಧಿತವೇ ಆಗಿದೆ. ಈ ಸಂದರ್ಭದಲ್ಲಿ ಅಧ್ಯಕ್ಷರುಗಳು ಶಿಕ್ಷಣದ ಗುಣಮಟ್ಟವನ್ನು ಸುಧಾರಿಸಬೇಕು, ಏಕ ಪ್ರಕಾರದ ಪಠ್ಯ ಪುಸ್ತಕಗಳನ್ನು ರಚಿಸಬೇಕು ಎಂಬುದನ್ನೇ ಪ್ರತಿಪಾದಿಸಿದ್ದಾರೆ. ಪ್ರಾಥಮಿಕ ಶಿಕ್ಷಣ, ಪ್ರೌಢಶಿಕ್ಷಣ, ಉಚ್ಚಶಿಕ್ಷಣ ಎಂಬ ಹಂತಗಳಲ್ಲಿ ಶಿಕ್ಷಣವನ್ನು ವಿಭಾಗಿಸಿ ಆಯಾ ವಯಸ್ಸಿಗನುಗುಣವಾಗಿ ಪಠ್ಯಗಳನ್ನು ರಚಿಸಿ ವಿದ್ಯಾಭ್ಯಾಸ ಕ್ರಮವನ್ನು ನಡೆಸುವುದಾಗಿತ್ತು. ಆದರೆ ಹಲವು ಪ್ರಾಂತಗಳಲ್ಲಿ ಹರಿದು ಹಂಚಿಹೋಗಿ ಕರ್ನಾಟಕದಲ್ಲಿ ಕನ್ನಡ ಶಾಲೆಗಳು ಕಡಿಮೆ ಪ್ರಮಾಣದಲ್ಲಿದ್ದವು. ಹೆಚ್ಚಿನ ಪ್ರಮಾಣದಲ್ಲಿರುವ ಕನ್ನಡ ಭಾಷಿಕರಿಗೆ ಆಯಾ ಪ್ರಾಂತ್ಯದ ಆಡಳಿತ ಭಾಷೆಯೇ ಅಧಿಕೃತವಾಗಿ ಶಿಕ್ಷಣದ ಮಾಧ್ಯಮವೂ ಆಗಿತ್ತು. ಇಂಥ ಕಡೆಗಳಲ್ಲೆಲ್ಲಾ ಕನ್ನಡ ಕಲಿಯುವುದು ಕಷ್ಟದ ಕೆಲಸವಾಗಿತ್ತು. ಅದುವರೆಗೂ ಮಾತೃಭಾಷೆಯನ್ನು ಕಲಿಯುತ್ತಾ ಬಂದಂತಹ ಮಗು ಪುನಃ ಶಾಲೆಯಲ್ಲಿ ಕನ್ನಡ ಕಲಿಯುವುದು ಎಂದರೇನು? ಯಾಕೆ ಶಾಲೆಗಳಲ್ಲಿನ ಭಾಷಾ ಕಲಿಕೆಗಳಿಗೆ ಇಷ್ಟು ಮಹತ್ವವನ್ನು ಕೊಡಬೇಕಾಗಿದೆ ಎನ್ನುವ ಪ್ರಶ್ನೆಗೆ ಮುಂದಿನ ವಿಚಾರದಲ್ಲಿ ಉತ್ತರವನ್ನು ಕಲಿಯಬಹುದು. ಶಾಲೆಯಲ್ಲಿ ಕಲಿಯುವುದು ಎಂದರೆ ಇದಕ್ಕೆ ಎರಡು ನೆಲೆಯ ಉತ್ತರಗಳಿವೆ. ಒಂದು: ಭಾಷೆಯ ಇನ್ನೆರಡು ಕೌಶಲಗಳಾದ ಓದುವುದು ಮತ್ತು ಬರೆಯುವುದು. ಈ ಎರಡನ್ನು ಮಕ್ಕಳಲ್ಲಿ ರೂಢಿಸುವುದು. ಎರಡನೆ ನೆಲೆಯೆಂದರೆ ಶಾಲೆಗೆ ಬರುವಾಗ ಮಕ್ಕಳು ಪಡೆದುಕೊಂಡಿರುವ ಭಾಷೆಯ ಸ್ವರೂಪವನ್ನು ಹೆಚ್ಚು ಪ್ರಮಾಣಬದ್ಧ ಭಾಷೆಗೆ ಪರಿವರ್ತಿಸುವುದು. ಅಂದರೆ ಪ್ರಮಾಣ ಭಾಷೆಯನ್ನು ಕೇಳಿ ಅರಿಯಲು ಮತ್ತು ಮಾತನಾಡಲು ಕಲಿಯುವಂತೆ ಮಾಡುವುದು'.[೧೪] ಆದ್ದರಿಂದ ಶಿಕ್ಷಣದಲ್ಲಿ ಹಂತ ಹಂತವಾಗಿ ಭಾಷೆಯಲ್ಲಿ ಸಾಮರ್ಥ್ಯವನ್ನು ಪಡೆಯುವುದಕ್ಕೆ ಭಾಷಾ ಮಾಧ್ಯಮ ಅವಶ್ಯಕವಾಗಿರುತ್ತದೆ.

ಕರ್ನಾಟಕವು ಶಿಕ್ಷಣದಲ್ಲಿ ಹಿನ್ನಡೆ ಪಡೆಯಲು ಅದರ ಮಾಧ್ಯಮ, ಗುಣಮಟ್ಟ ಇತ್ಯಾದಿಗಳು ಕಾರಣವಾಗಿದ್ದವು. ಇದ್ದ ಹಲಕೆಲವು ಶಾಲೆಗಳು ಇಂಥ ಸಮಸ್ಯೆಯಿಂದ ನರಳುತ್ತಿದ್ದವು. ಆದರೆ ಕೆಲವು ಯುರೋಪಿನ/ಬ್ರಿಟೀಷ ಅಧಿಕಾರಿಗಳು ತಮ್ಮ ಪ್ರಯತ್ನದಿಂದ ಕನ್ನಡ ಶಾಲೆಗಳನ್ನು ಆರಂಭಿಸುವುದರ ಮೂಲಕ ಆ ಭಾಗದ ಜನಗಳಿಗೆ ಉಪಕಾರವನ್ನೆ ಮಾಡಿದ್ದಾರೆ. '೧೮೨೬ರಲ್ಲಿ ಸರ್ಕಾರವು ಹುಬ್ಬಳ್ಳಿ ಮತ್ತು ಧಾರವಾಡಗಳಲ್ಲಿ ಆ ಪ್ರಾಂತ ಆಡಳಿತ ಭಾಷೆಯಾದ ಮರಾಠಿ ಶಾಲೆಗಳನ್ನು ಆರಂಭಿಸಿದರು. ಆದರೆ ಸರ್ ವಾಲ್ಟರ್ ಎಲಿಯಟ್ ಇಲ್ಲಿಯ ಬಹುತೇಕ ಜನರ ಭಾಷೆ ಕನ್ನಡ ಆಗಿರುವುದರಿಂದ ಕನ್ನಡವೇ ಆಡಳಿತ ಭಾಷೆಯಾಗುವುದು ಸೂಕ್ತ ಎಂದು ಧಾರವಾಡದಲ್ಲಿ ಕನ್ನಡ ಶಾಲೆಯನ್ನು ಆರಂಭಿಸಲು ೧೮೩೦ರಲ್ಲಿ ಅರ್ಜಿ ಸಲ್ಲಿಸಿದನು. ಆದರೆ ಸರ್ಕಾರ ಅನುಮತಿ ನೀಡಲಿಲ್ಲ. ೧೮೩೩ ರವರೆಗೆ ಮೂರು

ವರ್ಷಗಳ ಕಾಲ ಎಲಿಯಟ್ ಸ್ವಂತ ಖರ್ಚಿನಲ್ಲೇ ಶಾಲೆಯನ್ನು ನಡೆಸಿದ.[೫] ಇಲ್ಲಿ ಕೆಲವು ಬ್ರಿಟೀಷ್ ಅಧಿಕಾರಿಗಳು ಇಲ್ಲಿನ ವಾಸ್ತವವನ್ನು ಅರಿತುಕೊಂಡಿದ್ದರು ಎಂಬುದು ತಿಳಿಯುತ್ತದೆ.

'ಕರ್ನಾಟಕದಲ್ಲಿ ಕರ್ನಾಟಕತ್ವವನ್ನು ಮೂಡಿಸಲು ನಮ್ಮ ಶಿಕ್ಷಣ ಸಂಸ್ಥೆಗಳ ಗುಣಮಟ್ಟದಲ್ಲಿ ಮತ್ತು ಶಿಕ್ಷಣ ಕ್ರಮದಲ್ಲಿ ಯೋಗ್ಯ ಬದಲಾವಣೆಗಳನ್ನು ತರುವುದು ಅನಿವಾರ್ಯವಾಗಿತ್ತು. ಯೋಗ್ಯಶಿಕ್ಷಣ ಕ್ರಮವಿಲ್ಲದೆ ಹೋದರೆ ಯಾವ ದೇಶವು ಮುಂದುವರೆಯಲಾರದು. ಆದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತಿನವರು ಈ ಕಾರ್ಯವನ್ನು ಕೈಗೆತ್ತಿಕೊಂಡು ಯೋಗ್ಯ ಪಠ್ಯ ಪುಸ್ತಕ ರಚನಾ ಕಾರ್ಯಕ್ಕೆ ಒತ್ತು ನೀಡಬೇಕು.'[೬] ಇಲ್ಲಿ ಕರ್ನಾಟಕತ್ವಕ್ಕೂ ಮತ್ತು ಶಿಕ್ಷಣಕ್ಕೂ ಇರುವ ಸಂಬಂಧವು ಮತ್ತು ಶಿಕ್ಷಣದ ಮೂಲಕವೇ ದೇಶದ ಮುಂದುವರಿಕೆ ಎನ್ನುವುದನ್ನು ಈ ಮೇಲಿನ ಅಭಿಪ್ರಾಯದಲ್ಲಿ ಕಾಣಬಹುದು. ಇಲ್ಲಿ ಶಿಕ್ಷಣಕ್ಕಿರುವ ಮಹತ್ವ ಜೊತೆಗೆ ಜವಾಬ್ದಾರಿಯನ್ನು ಸೂಕ್ಷ್ಮವಾಗಿ ಗಮನಿಸಬಹುದು. ಇಂತಹ ಜವಾಬ್ದಾರಿಯುತ ಕೆಲಸವು ಉತ್ತಮ ಗುಣಮಟ್ಟದ ಪಠ್ಯ ಪುಸ್ತಕಗಳ ರಚನೆ ಇಂಥ ಜವಾಬ್ದಾರಿಯುತ ಕೆಲಸವು ಉತ್ತಮ ಗುಣಮಟ್ಟದ ಪಠ್ಯಪುಸ್ತಕಗಳ ರಚನೆಯಿಂದ ಮಾತ್ರ ಸಾಧ್ಯ. ಪಠ್ಯಪುಸ್ತಕಗಳ ರಚನೆ ಮತ್ತು ಗುಣಮಟ್ಟ ಸುಧಾರಿಸಬೇಕೆಂದರು. ಪ್ರಾಥಮಿಕ ಮಟ್ಟದಲ್ಲಿ ಉಪಯೋಗಿಸುವ ಅಭ್ಯಾಸದ ಪುಸ್ತಕಗಳಲ್ಲಿಯೂ ಇತಿಹಾಸ ಭೌಗೋಳಿಕಗಳಲ್ಲಿ ಅನೇಕ ಬದಲಾವಣೆಯಾಗುವ ಅವಶ್ಯವಿದೆ. ಆ ಮಟ್ಟದಲ್ಲಿ ಮಕ್ಕಳಿಗೆ ನಮ್ಮ ದೇಶದ ಬಗ್ಗೆ ಗೌರವ ಮೂಡುವ ಮತ್ತು ಸಂಸ್ಕೃತಿಯ ಜ್ಞಾನ ಮೂಡುವಂತಹ ಪಠ್ಯಪುಸ್ತಕಗಳನ್ನು ರಚಿಸಬೇಕು. ಜೊತೆಗೆ ದೇಶದಲ್ಲಿ ಅನೇಕ ಸಾದು ಸತ್ಪುರುಷರು, ವೀರಪುರುಷರು, ಗ್ರಂಥಕಾರರು ಇವರ ಬಗೆಗಿನ ವಿವರಗಳನ್ನು ಅಳವಡಿಸಬೇಕು. ರಾಜ್ಯದ ರಾಜರುಗಳ ಇತಿಹಾಸವನ್ನು ತಿಳಿಸುವ ಪಠ್ಯಗಳನ್ನು ರಚಿಸಬೇಕು. ಆಡಳಿತ ಅಧಿಕಾರಿಗಳು ತಮ್ಮ ಹಿತಾಸಕ್ತಿಗನುಗುಣವಾಗಿಯೇ ಅವರ ನಾಡಿನ ಚರಿತ್ರೆ, ಕಥೆ, ಸಾಹಿತ್ಯ, ಭೂಗೋಳ ವಿಷಯಗಳನ್ನು ಅಳವಡಿಸಿರುತ್ತಾರೆ. ಆ ವಯಸ್ಸಿನಲ್ಲಿ ಮಕ್ಕಳ ಮನಸ್ಸಿನಲ್ಲಿ ನಾಡಿನ ಬಗ್ಗೆ ಶ್ರೇಷ್ಠತರವಾದ ಭಾವನೆಗಳನ್ನು ಮೂಡಿಸಬೇಕು. ಆ ವಯಸ್ಸಿನಲ್ಲಿ ಬೇರೂರಿದ ವಿಚಾರಗಳು ಕಡೆತನಕ ನಿಲ್ಲುತ್ತವೆ. ಇಲ್ಲಿ ಶ್ರೇಷ್ಠತರವಾದ ಭಾವನೆ ಎಂದರೇನು ಎನ್ನುವ ಪ್ರಶ್ನೆ ಹುಟ್ಟುತ್ತದೆ. ನಾಡಿನ ಬಗ್ಗೆ ಚರಿತ್ರೆಯ ಬಗ್ಗೆ ಕೇವಲ ವರ್ಣ ರಂಜಿತವಾಗಿ ವೈಭವೋಪೇತವಾಗಿ ಹೇಳಿ ನಮ್ಮದು ಶ್ರೇಷ್ಠ ಎನ್ನುವ ಭಾವನೆ ಆಗಿರಬಹುದು. ಹೌದು ನಮ್ಮ ನಾಡಿನ ಬಗ್ಗೆ ಚರಿತ್ರೆಯ ಬಗ್ಗೆ ಭಾಷೆಯ ಬಗ್ಗೆ ಸಂಸ್ಕೃತಿಯ ಬಗ್ಗೆ ಇತ್ಯಾದಿ ವಿಷಯಗಳ ಬಗ್ಗೆ ಅಭಿಮಾನವಿರುವುದರಿಂದ ಅದು ಶ್ರೇಷ್ಠವಾಗಿ ಕಾಣುತ್ತದೆ. ಮತ್ತು ಕಾಣಿಸಲಾಗುತ್ತದೆ. ಆ ವಯಸ್ಸಿನಿಂದಲೇ ಶ್ರೇಷ್ಠತೆಯ ಬಗ್ಗೆ ಹೇಳುತ್ತಾ ಒಂದು ರೀತಿಯ ತೆಳುವಾದ ಪೊರೆಯನ್ನು ಅವರ ವೈಚಾರಿಕತೆ ಹೊದಿಸಿದಂತಾಗುತ್ತದೆ ಎನ್ನಬಹುದು ಮತ್ತು ಇವೆ ಭಾವನೆಗಳು ಕಡೆಯವರೆಗೂ ಉಳಿಯುತ್ತವೆ ಎಂದು ಹೇಳಲಿಕ್ಕಾಗದು. ಅವು ಪಲ್ಲಟಗೊಳ್ಳಬಹುದು. ನಮ್ಮದು ಶ್ರೇಷ್ಠ ಎನ್ನುವ ಹುಸಿ ನಂಬಿಕೆಯ ಮೂಲಕ ನಂಬಿಸಲಾಗುತ್ತದೆ. ಈ ಶ್ರೇಷ್ಠತೆಯ ಹಿಂದಿರುವ ವಿಷಮತೆಯನ್ನು ನಯವಾಗಿ ಮುಚ್ಚಿಡುತ್ತಾ ಯಾವ ಶಿಕ್ಷಣದ ಮೂಲಕ ಜ್ಞಾನ ವಿಕಾಸವಾಗಬೇಕೋ ಆ ಶಿಕ್ಷಣದ ಮೂಲಕವೇ ಮಂಕು ಕವಿಯುವಂತೆ ಮಾಡಲಾಗುತ್ತದೆ ಎಂದರೆ ತಪ್ಪಾಗಲಾರದು'.[೭] 'ಪ್ರಾಥಮಿಕ ಶಿಕ್ಷಣದಲ್ಲಿ ನಾಡಿನ ಎಲ್ಲಾ ಕಡೆ ಒಂದೇ ರೀತಿಯ ಪಠ್ಯ ಪುಸ್ತಕಗಳು ರಚನೆಯಾಗಬೇಕು. ಆ ಸಂದರ್ಭದಲ್ಲಿ ನಾಡಿನ ವಿವಿಧ ಪ್ರಾಂತಗಳಿಂದ

ಮಹನೀಯರ ಸಲಹೆ ಪಡೆದು ಪಠ್ಯಪುಸ್ತಕ ನಿರ್ಮಾಣ ಕಾರ್ಯ ನಡೆಸಬೇಕು. ಆಗ ಕರ್ನಾಟಕ ಭಾಷೆಯಲ್ಲಿನ ಭಿನ್ನತೆಗಳು ತೊಲಗಿ ಏಕತೆ ಉಂಟಾಗುತ್ತದೆ. ಪ್ರೌಢ ಶಿಕ್ಷಣ ವಿಭಾಗದಲ್ಲಿಯೂ ಹಲವು ಬದಲಾವಣೆಗಳು ಅವಶ್ಯಕ. ಏಕೆಂದರೆ ಪ್ರಾಥಮಿಕ ಶಿಕ್ಷಣದಂತೆ ಪ್ರೌಢಶಿಕ್ಷಣವು ಮಹತ್ವದ್ದಾಗಿದೆ. ಉನ್ನತ ಶಿಕ್ಷಣದಲ್ಲಿ ಕನ್ನಡ ಭಾಷೆ ಇರಲಿಲ್ಲ. ಆದ್ದರಿಂದ ಉನ್ನತ ವಿದ್ಯಾಭ್ಯಾಸದಲ್ಲಿ ಕನ್ನಡವನ್ನು ಮಾಧ್ಯಮ ಮಾಡುವುದು ಅವಶ್ಯಕವಾಗಿದೆ. ಅಲ್ಲದೆ ಕರ್ನಾಟಕಕ್ಕೆಂದೇ ಒಂದು ವಿಶ್ವವಿದ್ಯಾಲಯದ ಅವಶ್ಯಕತೆಯಿದೆ[8] ಎಂಬುದನ್ನು ತಿಳಿಸಿದ್ದಾರೆ.

ಶಿಕ್ಷಣ ವಲಯದಲ್ಲಿ ಗುಣಮಟ್ಟ ಮಾಧ್ಯಮ ಇತ್ಯಾದಿಗಳ ಬಳಕೆ ಮಾತ್ರವೇ ಅವಶ್ಯಕವಲ್ಲ. ಶಿಕ್ಷಕನ ಪಾತ್ರವು ತುಂಬಾ ಮಹತ್ತರವಾದದ್ದು. ಕನ್ನಡ ಭಾಷೆಯಲ್ಲಿ ವಿಶೇಷ ಪಾಂಡಿತ್ಯವನ್ನು ಹುರಿಗೊಳಿಸುವ ಸಾಮರ್ಥ್ಯವುಳ್ಳವರಾಗಿರಬೇಕು. ಇಂತಹ ಶಿಕ್ಷಕರು ಸಮರ್ಥವಾಗಿ ಬೋಧನೆ ಮಾಡುವುದರಿಂದ ಶಿಕ್ಷಣದ ಸರ್ವತೋಮುಖ ಬೆಳವಣಿಗೆಗೆ ಸಾಧ್ಯವಾಗಬಹುದು. ಶಿಕ್ಷಣದ ಮಾಧ್ಯಮ ಯಾವುದಾಗಿರಬೇಕು ಎಂಬ ವಿಷಯದ ಬಗ್ಗೆ ಚರ್ಚೆಗಳು ಸಾಕಷ್ಟು ನಡೆದಿದ್ದವು. ಲಾರ್ಡ ಮೆಕಾಲೆ ಶಿಕ್ಷಣ ಮಾಧ್ಯಮವಾಗಿ ಇಂಗ್ಲೀಷನ್ನೇ ತರುವ ಪ್ರಯತ್ನ ಮಾಡಿದನು. ಇದಕ್ಕೆ ಕೆಲವು ದೇಶೀಯರು ಕೂಡ ಒಪ್ಪಿಗೆಯನ್ನು ಸೂಚಿಸಿದರು. ಮಾತೃ ಭಾಷೆಯಲ್ಲಿ ಅಥವಾ ಅದಕ್ಕೆ ಸಮನಾದ ಭಾಷೆಯಲ್ಲಿ ಪಾಠ ಕಲಿಸುವುದರಿಂದ ಬರುವ ಸಂಸ್ಕಾರವು ಬೇರೆ ಯಾವ ಭಾಷೆಯಿಂದಲೂ ಬರುವುದಿಲ್ಲ. ಅಂದಾಗ ಮೆಕಾಲೆಯ ಮಾತಿಗೆ ಒಪ್ಪಿಕೊಳ್ಳುವ ಮನಸ್ಸು ನಮ್ಮ ದೇಶೀಯರಿಗೇಕೆ ಬಂದಿತು?

ಪಠ್ಯಪುಸ್ತಕಗಳನ್ನು ರಚಿಸುವಾಗ ಹೆಚ್ಚು ಗಮನ ಕೊಡಬೇಕಾಗುತ್ತದೆ. ಏಕೆಂದರೆ ನಾಡಿನಾ ದ್ಯಂತ ಒಂದೇ ರೀತಿಯ ಪಠ್ಯಗಳು ಏರ್ಪಡುವುದು ತುಂಬಾ ಅವಶ್ಯವಿದೆ. ಶಿಕ್ಷಣದಲ್ಲಿ ಭಾಷಾ ಸಾಹಿತಿಗಳು ಹಿಂದೆ ಬೀಳಲು ಒಂದು ಕಾರಣವಿದೆ. ಅದು ವಿಜ್ಞಾನಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡುವುದು. ವಿಜ್ಞಾನದ ವಿದ್ಯಾರ್ಥಿಗಳ ಭಾಷಾ ಸಾಹಿತ್ಯದ ವ್ಯಾಸಂಗ, ಬರವಣಿಗೆಗಳು ಬೇಡ ಎನ್ನುವ ಒಂದು ಕೂಗು ಇದೆ. ಅವರು ಓದಿದ್ದನ್ನು ಬರೆಯುವುದಕ್ಕಾದರೂ ಭಾಷಾ ಸಾಮರ್ಥ್ಯ ಬೇಕಲ್ಲವೇ? ಯುರೋಪ್ ಮುಂತಾದ ದೇಶಗಳಲ್ಲಿ ಆಯಾ ದೇಶಭಾಷೆ ಮಾತ್ರ ಇದ್ದು, ಅದೇ ಪಾಠ ಭಾಷೆ, ಅದೇ ಪ್ರವಚನ, ಅದೇ ಪರೀಕ್ಷೆಯ ಭಾಷೆ. ಆದ್ದರಿಂದ ನಮ್ಮ ದೇಶದಲ್ಲಿ ಇಂಗ್ಲೀಷ್‌ಗೆ ಪ್ರಾಧಾನ್ಯತೆಯನ್ನು ಕಡಿಮೆ ಮಾಡಿ ಐಚ್ಚಿಕ ವಿಷಯಗಳ ಹೊರೆಯನ್ನು ಕಡಿಮೆ ಮಾಡಿ ದೇಶೀಯ ಭಾಷೆಗಳಿಗೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಡಬೇಕು.'[9] 'ನಾಡಿನಲ್ಲೆಲ್ಲಾ ಪ್ರಾದೇಶಿಕ ಭಾಷೆಯ ಅಸಮಾನತೆಯನ್ನು ಹೊಡೆದೋಡಿಸಲು ಪಠ್ಯಪುಸ್ತಕಗಳು ಕಾರಣವಾಗಬೇಕು. ಇದರಿಂದ ನಾಡಿನ ಏಕೀಕರಣಕ್ಕೆ ಅನುಕೂಲವುಂಟಾಗುತ್ತದೆ. ನಮ್ಮ ವಿದ್ಯಾಭ್ಯಾಸ ಕ್ರಮದಲ್ಲಿ ಇಂಗ್ಲೀಷ್‌ಗಿರುವ ಕೃತಕ ಪ್ರಾಮುಖ್ಯತೆಯನ್ನು ಎಲ್ಲರೂ ವಿರೋಧಿಸಿದ್ದಾರೆ/ ವಿರೋಧಿಸುತ್ತಿದ್ದಾರೆ. ಇಂಗ್ಲೀಷ್ ಭಾಷೆಯು ಒಂದು ರೀತಿಯ ಸಂಕೋಲೆಯನ್ನು ವಿಧಿಸಿದೆ. ಆದ್ದರಿಂದ ನಾವಿನ್ನು ಬಿಡುಗಡೆ ಹೊಂದಲು ಸಾಧ್ಯವಿಲ್ಲ. ಕೆಲವರು ಸಂಕೋಲೆಯ ಭಾರವೇ ಅಭ್ಯಾಸವಾಗಿ ನಡೆ ಕಲಿತ ಕೆಲವರು ಅದರಿಂದ ಬಿಡುಗಡೆ ಹೊಂದುವ ಇಷ್ಟವೂ ಇಲ್ಲ. ಹಾಗೇ ಸಂಕೋಲೆ ಹಾಕಿಕೊಳ್ಳದೆ ಕಲಿತ ನಡೆ ಶಿಷ್ಟಾಚಾರ ಸಮ್ಮತವಾಗುವುದಿಲ್ಲ ಎಂಬ ಹಾಸ್ಯಾಸ್ಪದ ಅಭಿಪ್ರಾಯವನ್ನುಳ್ಳವರಾಗಿದ್ದಾರೆ. ಹೊರಗಿನ

ಸಂಕೋಲೆಯಿಂದ ಬಿಡುಗಡೆ ಹೊಂದುವಷ್ಟು ಸುಲಭವಲ್ಲ ಈ ಅಂತರ್‌ದಾಸ್ಯ ವಿಮೋಚನೆ.'[೧೦]

ಹೀಗೆ ಇಂಗ್ಲೀಷ್ ಎಂಬುದು ಒಂದು ರೀತಿಯ ಬಿಡಿಸಿಕೊಳ್ಳಲಾರದ ಸಂಕೋಲೆಯಂತೆ ಆಗಿದೆ. ಯಾವ ಭಾಷೆ ನಮ್ಮನ್ನು ದಾಸ್ಯಕ್ಕೆ ಅವಕಾಶ ಕೊಟ್ಟಿತೋ ಆ ಭಾಷೆಗೆ ದಾಸ್ಯರಾಗುವಂತಾಗಿದೆ. ಕೆಲವರು ಇಂಗ್ಲೀಷ್ ಭಾಷೆಯೇ ಅನಿವಾರ್ಯ ಎಂಬಂತೆ ವಾದಿಸುತ್ತಾರೆ. ಶಿಕ್ಷಣದಲ್ಲಿ ಎಷ್ಟು ಭಾಷೆಗಳನ್ನು ಅಳವಡಿಸಬೇಕು? ಯಾವ ಭಾಷೆಗೆ ಹೆಚ್ಚಿನ ಸ್ಥಾನ ಕೊಡಬೇಕು? ಇತ್ಯಾದಿ ಪ್ರಶ್ನೆಗಳು ಈ ಭಾಷಣಗಳಲ್ಲಿ ಮೂಡಿವೆ. ದೇಶೀಯ ಭಾಷೆಯಾಗಿ ಕನ್ನಡವನ್ನು ರಾಷ್ಟ್ರ ಭಾಷೆಯಾಗಿ ಹಿಂದಿಯನ್ನು ಅಂತರಾಷ್ಟ್ರೀಯ ಭಾಷೆಯಾಗಿ ಇಂಗ್ಲೀಷನ್ನು ಕ್ರಮವಾಗಿ ಪ್ರಥಮ ಭಾಷೆ ಕನ್ನಡ ದ್ವಿತೀಯ ಭಾಷೆ ಇಂಗ್ಲೀಷ್ ತೃತೀಯ ಭಾಷೆ ಹಿಂದಿ, ಎನ್ನುವ ವಾದವನ್ನೇ ಭಾಗಶಃ ಎಲ್ಲರೂ ಒಪ್ಪಿಗೆಯನ್ನು ಸೂಚಿಸಿದರು. ಕೆಲವರು ಇಂಗ್ಲೀಷ್ ಭಾಷೆಯನ್ನೇ ರಾಷ್ಟ್ರಭಾಷೆಯಾಗಲಿಕ್ಕೆ ಅರ್ಹ ಎಂಬಂತೆ ಹೇಳಿದ್ದುಂಟು. ಹೀಗೆ ಶಿಕ್ಷಣದ ಭಾಷೆ ಪಠ್ಯಪುಸ್ತಕ ರಚನೆ ಗುಣಮಟ್ಟ ಇತ್ಯಾದಿ ಅಂಶಗಳು ಇಲ್ಲಿ ಕಂಡುಬರುತ್ತವೆ.

'ಬೇರೆ ಬೇರೆ ಪ್ರಾಂತಗಳಲ್ಲಿರುವ ಟೆಕ್ಸ್ಟ್ ಬುಕ್ ಕಮಿಟಿಗಳವರು ತಮ್ಮ ಕೆಲಸವನ್ನು ಜವಾಬ್ದಾರಿಯುತವಾಗಿ ನಿಭಾಯಿಸಬೇಕಾಗಿದೆ. ಈ ಕಮಿಟಿಗಳಿರುವುದು ವಿದ್ಯಾರ್ಥಿಗಳ ಶ್ರೇಯಸ್ಸಿಗಾಗಿ. ಅದು ಬಿಟ್ಟು ಅವರು ಕೆಲಸ ಮಾಡುವುದು ಪುಸ್ತಕ ಬರೆಯುವವರ ಲಾಭಕ್ಕಾಗಿ ಎಂಬಂತೆ ಆಗಿದೆ. ಯಾವುದೇ ಪಠ್ಯಗಳನ್ನು ಪಾಠಕ್ಕೆಂದು ನಿಯಮಿಸುವ ಮೊದಲು ಪುಸ್ತಕದಿಂದ ವಿದ್ಯಾರ್ಥಿಗಳು ಭಾಷೆಯನ್ನು ಕಲಿಯಬಹುದೇ, ಸರಿಸವಾಗಿದೆಯೇ, ವಿಚಾರಯುಕ್ತವಾಗಿದೆಯೇ, ಉದಾತ್ತ ಭಾವನೆಗಳನ್ನೊಳಗೊಂಡಿದೆಯೇ ಎಂದು ಆಲೋಚಿಸಬೇಕು. ಪಠ್ಯ ಪುಸ್ತಕ ರಚನಾ ಸಮಿತಿಯ ಕೆಲಸ ವಿದ್ಯಾರ್ಥಿಗಳಿಗೆ ಒಳ್ಳೆಯ ಪುಸ್ತಕಗಳನ್ನು ಒದಗಿಸುವುದು. ಆ ಸಂದರ್ಭದಲ್ಲಿ ಪೂರ್ವದ ಪುಸ್ತಕಗಳನ್ನೇ ಸರಿಪಡಿಸುವ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಬೇಕು. ಇದು ಕಷ್ಟದ ಕೆಲಸವೇ. ಆದರೆ ಇದನ್ನು ಮಾಡದೇ ಬೇರೆ ದಾರಿಯಿಲ್ಲ. ಪುಸ್ತಕಗಳನ್ನು ನಿಯಮಿಸುವಲ್ಲಿ ಸಮಿತಿಯ ಸದಸ್ಯರುಗಳು ಗ್ರಂಥಕರ್ತರ ಬಗ್ಗೆ ತೋರಿಸುವ ಆದರ ವಿದ್ಯಾರ್ಥಿಗಳ ವಿಷಯದಲ್ಲಿ ತೋರಿಸಿದರೆ ತಮ್ಮ ಕರ್ತವ್ಯವನ್ನು ಸರಿಯಾದ ನಿಟ್ಟಿನಲ್ಲಿ ನಿಭಾಯಿಸಿದರೆ ಭಾಷಾ ಬೆಳವಣಿಗೆಗೆ ತುಂಬಾ ಸಹಕಾರಿಯಾಗುತ್ತದೆ.'[೧೧] ಎಂದು ಪಠ್ಯಪುಸ್ತಕಗಳ ರಚನಾ ಸಮಿತಿಯ ಹೊಣೆಯನ್ನು ವಿವರಿಸುವುದನ್ನು ಕಾಣಬಹುದು. ಹೀಗೆ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳಲ್ಲಿ ಶಿಕ್ಷಣದ ಮಹತ್ವ ಗುಣಮಟ್ಟ ಜವಾಬ್ದಾರಿ ಇತ್ಯಾದಿ ವಿಷಯಗಳನ್ನು ಈ ಮೇಲಿನಂತೆ ಚರ್ಚಿಸುವುದನ್ನು ಕಾಣಬಹುದಾಗಿದೆ.

**ಪತ್ರಿಕೆಗಳ ಬಗ್ಗೆ**

'ಹರಿದು ಹಂಚಿ ಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸುವಲ್ಲಿ ಪತ್ರಿಕೆಗಳ ಪಾತ್ರ ಮಹತ್ವದ್ದು. ಅಂದು ಕಲ್ಲಚ್ಚಿನಲ್ಲಿ ಪ್ರಾರಂಭವಾಗಿ ಇಂದು ಆನ್‌ಲೈನ್‌ವರೆಗೆ ಎಲ್ಲವನ್ನು ಅರಗಿಸಿಕೊಳ್ಳುವ ಶಕ್ತಿಯನ್ನು ಅದೇ ರೀತಿಯ ಗುಣಮಟ್ಟವನ್ನು ಕಾಯ್ದುಕೊಂಡು ಬರುತ್ತಿದೆ. ನಮಗೆ ಲಭ್ಯವಿರುವ ಆಧಾರಗಳ ಪ್ರಕಾರ ಕನ್ನಡ ಪತ್ರಿಕೋದ್ಯಮ ಆರಂಭಗೊಂಡಿದ್ದು ೧೮೪೩ ಜುಲೈ ತಿಂಗಳ ಒಂದನೇ ತಾರೀಕು. ಮಂಗಳೂರಿನಲ್ಲಿ ಬಾಸೆಲ್ ಮಿಷೆನ್ನಿನ ಪಾದ್ರಿ ಹರ್ಮನ್ ಫೆಟ್ರಿಕ್ ಮೊಗ್ಲಿಂಗ್ ಹೊರಡಿಸಿದ ಪತ್ರಿಕೆ

'ಮಂಗಳೂರು ಸಮಾಚಾರ.'[೧೨] ಅದು ಕನ್ನಡದ ಮೊದಲ ಪತ್ರಿಕೆ ಆರಂಭದ ಪತ್ರಿಕೆಗಳಲ್ಲಿ ಕರ್ನಾಟಕದ ಏಕೀಕರಣ ಮತ್ತು ದೇಶದ ಸ್ವಾತಂತ್ರ್ಯದ ಅಭೀಪ್ಸೆಗಳು ಹೆಚ್ಚಾಗಿ ಮೂಡಿಬಂದಿವೆ. ಆ ಸಂದರ್ಭದಲ್ಲಿ ಪ್ರಕಟಗೊಂಡ ಪತ್ರಿಕೆಗಳ ಹೆಸರಿನಲ್ಲಿಯೇ ಬಹುಪಾಲು ಇದು ತಿಳಿಯುತ್ತದೆ. ದೇಶಾಭಿಮಾನಿ, ಭಾರತ ಶುಭೋದಯ, ಕರ್ನಾಟಕ ಭಾಷಾ ಸೇವಕ, ಕರ್ನಾಟಕ ವೈಭವ, ಕರ್ನಾಟಕ ಜೀವನ, ಪ್ರಬುದ್ಧ ಕರ್ನಾಟಕ, ಕರ್ನಾಟಕ ನಂದಿನಿ ಮುಂತಾದವುಗಳನ್ನು ಗಮನಿಸಿದರೆ ಆಯಾ ಕಾಲದ ಪತ್ರಿಕೆಗಳ ಹೆಸರುಗಳೇ ಕಾಲದ ಆಶಯವನ್ನು, ಆಕಾಂಕ್ಷೆಗಳನ್ನು ಪ್ರತಿಬಿಂಬಿಸಬಲ್ಲವು.

'ಕರ್ನಾಟಕ ರಾಜ್ಯ ಉದಯವಾಗುವ ಹೊತ್ತಿಗೆ ಪತ್ರಿಕೆಗಳು ಉದಯವಾಗಿದ್ದವು. ಆಗ ಪತ್ರಿಕೆಗಳು ಒಂದು ಉದ್ಯಮವಾಗಿ ಬೆಳೆದಿರಲಿಲ್ಲ. ಅದು ನಾಡಿನ ಸೇವೆ ಮಾತ್ರ ಎಂಬ ಧೋರಣೆಯನ್ನು ಉಳ್ಳದ್ದಾಗಿತ್ತು. ಆಗಿನ ಪತ್ರಿಕೆಗಳಲ್ಲಿ ಜಾಹಿರಾತಿನ ಆದಾಯ ಕಡಿಮೆಯಿತ್ತು. ಆಗ ಪತ್ರಿಕೋದ್ಯಮ ಎಂದರೆ ಮಾಸಿಕ ಪತ್ರಿಕೆಗಳೇ ಆ ಕಾರ್ಯವನ್ನು ನಿಭಾಯಿಸುತ್ತಿದ್ದವು. ಇನ್ನು ಸಾರಿಗೆ ಸಂಪರ್ಕ ವ್ಯವಸ್ಥೆ ಬೆಳೆದಿರಲಿಲ್ಲವಾದ್ದರಿಂದ ನಾಡಿನ ಎಲ್ಲಾ ಕಡೆಗಳಲ್ಲಿ ಪತ್ರಿಕೆಗಳನ್ನು ತಲುಪಿಸುವುದು ಕಷ್ಟವಾಗಿತ್ತು. ಪತ್ರಿಕೆಯಲ್ಲಿ ತೊಡಗಿರುವವರು ತುಂಬಾ ಕಷ್ಟಮಯ ಬದುಕನ್ನು ನಡೆಸುತ್ತಿದ್ದರು. ಮುದ್ರಣದ ಆಧುನಿಕತೆಯ ಸ್ಪರ್ಶ ಪಡೆದಿರಲಿಲ್ಲ. ಕಲ್ಲಚ್ಚಿನ ಮನೆಗಳು ಕೈಯಾರೆ ಮೊಳೆಗಳನ್ನು ಜೋಡಿಸುವ ಪರಿಸ್ಥಿತಿ ಇತ್ತು.[೧೩] ಅಂದಿನ ಕಾಲದಲ್ಲಿ ಪತ್ರಿಕೆಗಳ ಪರಿಸ್ತಿತಿ ಹೇಗಿತ್ತು ಎನ್ನುವುದನ್ನು ತಿಳಿಯಬಹುದು.

**ಪತ್ರಿಕೆಗಳ ಪಾತ್ರ**

ಪತ್ರಿಕೆಗಳು ಪ್ರಜಾಪ್ರಭುತ್ವದ ಮಹತ್ವದ ಅಂಗ. ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಪತ್ರಿಕೆಗಳ ಬಗ್ಗೆ ಮೇಲಿಂದ ಮೇಲೆ ಪ್ರಸ್ತಾಪ ಬಂದಿದೆ. ಪತ್ರಿಕೆಗಳ ಉದ್ದೇಶ ಕಾರ್ಯವೈಖರಿ, ಅವುಗಳ ಜವಾಬ್ದಾರಿ, ಅವುಗಳ ವಿಷಯ, ಬರಹಗಾರರು ಇತ್ಯಾದಿ ಪತ್ರಿಕೆಗಳ ವಿಷಯವಾಗಿ ಯಾವ ಅಂಶವನ್ನು ಪ್ರತಿಪಾದಿಸಿದ್ದಾರೆ ಎಂದು ಗಮನಿಸಬಹುದು. ಒಂದು ಪತ್ರಿಕೆಗೆ ಲೇಖಕ, ಸಂಪಾದಕ, ಪ್ರಕಾಶಕ, ಓದುಗರು ತುಂಬಾ ಮಹತ್ವವಾಗಿರುತ್ತಾರೆ. ಪತ್ರಿಕೆಯವರು ಓದುಗರ ಹಸಿವನ್ನು, ರುಚಿಯನ್ನು ಹಿಡಿದು ಅವನ್ನು ತೃಪ್ತಿಗೊಳಿಸುತ್ತಿದ್ದಾರೆ. ಪಾಠಕರು ಪ್ರಕಾಶಕರು ಪರಸ್ಪರ ಭಾವನೆಯಿಂದ ಭಾಷೆಯು ಆ ಮೂಲಕ ದೇಶದ ಪರಮ ಶ್ರೇಯಸ್ಸನ್ನು ಸಾಧಿಸಬೇಕಾಗಿದೆ. ಕನ್ನಡದಲ್ಲಿ ಪತ್ರಿಕೆಗಳ ಕೆಲಸ ಅದರಲ್ಲಿಯೂ ದಿನಪತ್ರಿಕೆಗಳ ಕೆಲಸ ಸುಲಭವಲ್ಲ. ತಂತಿಗಳು ಇಂಗ್ಲೀಷನಲ್ಲಿ ಬರುತ್ತವೆ. ಅವುಗಳನ್ನು ಹಾಗೇ ಅಚ್ಚಿಗೆ ಕಳುಹಿಸುವ ಹಾಗಿಲ್ಲ. ಅವುಗಳನ್ನು ಸಂಗ್ರಹಿಸಬೇಕು, ಕನ್ನಡಿಸಬೇಕು. ಮಾತುಗಳು ಸಿಕ್ಕುವುದಿಲ್ಲ. ಸರಸ್ವತಿಯ ಆತುರವನ್ನು ನಂಬಿ ಮಾತುಗಳನ್ನು ಹಿಡಿದು ತಂದು ತುಂಬಬೇಕಲು. ಇದಿಷ್ಟು ಬಿಸಿಯಾಗಿದ್ದು ಅಂಚೆಯೊತ್ತಿಗೆ ಮೂರು ಮೊಳ ನೇಯ್ದು ಅಚ್ಚಿಗೆ ಬಂದು ಹೊರಟು ಹೋಗಲೇಬೇಕು. ಬೆಳಗೆದ್ದರೆ ಮತ್ತೇ ಇದೇ ಕಥೆ ಇದೇ ಆತುರ. ಈ ಆತುರದಲ್ಲಿ ಆಗುವ ಕೆಲಸ ಅದ್ಭುತವಾದದ್ದು.'[೧೪] ಪುಸ್ತಕಗಳನ್ನು ಓದುವವರು ಕಡಿಮೆಯಿರುವಾಗ ಪತ್ರಿಕೆಗಳನ್ನು ಸಾವಿರಾರು ಜನರು ಓದುತ್ತಾ ಬಂದಿದ್ದಾರೆ. ಆದ್ದರಿಂದ ಭಾಷೆಯ ಅಭಿವೃದ್ಧಿ ಮತ್ತು ವಿಸ್ತರಣಾ ಕಾರ್ಯಗಳಲ್ಲಿ ಪತ್ರಿಕೆಗಳ ಪಾತ್ರ ಮುಖ್ಯವಾಗಿರುತ್ತದೆ. ಪತ್ರಿಕೆಗಳಲ್ಲಿ ಹೊಸ ಹೊಸ ಮಾತುಗಳು ಸೃಷ್ಟಿಯಾಗುತ್ತಿರುತ್ತವೆ.

ಪತ್ರಿಕೆಗಳ ಸಂದರ್ಭದಲ್ಲಿಯೂ ಭಾಷೆಯ ಹೋರಾಟದ ಪ್ರಶ್ನೆ ಬರುತ್ತದೆ. ಯಾವ ಭಾಷೆಯ ಪತ್ರಿಕೆಗಳು ಹೆಚ್ಚಿನ ಮನ್ನಣೆಯನ್ನು ಪಡೆಯುತ್ತವೆ ಎಂದಾಗ ಎಲ್ಲೆಲ್ಲಿ ಯಾವ ಭಾಷೆ ಅನುಕೂಲವೊ ಅಲ್ಲಲ್ಲಿ ಆ ಭಾಷೆಯನ್ನು ಅನುಸರಿಸೋಣ,[೧೫] ಭಾಗಶಃ ಇಂಗ್ಲೀಷ್ ಭಾಷೆಯಲ್ಲಿ ಈ ಕಾರ್ಯ ನಡೆದರೆ ಕನ್ನಡ ಭಾಷೆಯ ಬಗೆಗೆ ಮಡಿ ಭಾವನೆ ಹೋಗಿಬಿಡುತ್ತದೆ. ಇಂಗ್ಲೀಷ್ ಭಾಷಿಗರು ಯಾವ ದೇಶಕ್ಕೆ ಎಲ್ಲೆಲ್ಲಿ ಹೋಗುತ್ತಾರೋ ಅಲ್ಲಲ್ಲಿನ ಆ ಮಾತುಗಳನ್ನು ತೆಗೆದುಕೊಳ್ಳುವುದರಿಂದಲೇ ಏನೋ ಇಂದು ಜಗತ್ತಿನಲ್ಲಿ ಬಹು ದೊಡ್ಡ ಭಾಷೆಯಾಗಿ ಬೆಳೆಯುತ್ತಿದೆ. ಒಂದೇ ಒಂದು ಇಂಗ್ಲೀಷ್ ವಾಕ್ಯದಲ್ಲಿ ಇಪ್ಪತ್ತೈದು ಭಾಷೆಗಳಿಂದ ಬಂದ ಮಾತುಗಳಿರಬಹುದು (ಇಂಥ ವಾಕ್ಯದ ಒಂದು ಉದಾಹರಣೆಯನ್ನು ೧೬.೦೯.೧೯೩೪ರ ಟೈಮ್ಸ್ ಆಫ್ ಇಂಡಿಯಾ ಚಿತ್ರ ಪತ್ರಿಕೆಯು ಕೊಟ್ಟಿತು.'[೧೬] ಪತ್ರಿಕೆಗಳಲ್ಲಿ ಭಾಷಾ ಶುದ್ಧಿಯನ್ನು ಯೋಚನೆ ಮಾಡುತ್ತಾ ಕುಳಿತುಕೊಳ್ಳುವವನು ಪತ್ರಿಕೆಗಳನ್ನು ನಡೆಸಲಾರ. ಕನ್ನಡವು ಬೆಳೆಯಲು ಈ ಪತ್ರಿಕೆಗಳು ತುಂಬಾ ಸಹಾಯವನ್ನು ಮಾಡಿವೆ. ಆದರೆ ಪತ್ರಿಕೆಗಳ ಗುಣಮಟ್ಟವನ್ನು ಹೋಲಿಸಿದರೆ ಹಿಂದೂ ಮುಂತಾದ ಪತ್ರಿಕೆಗಳಂತೆ ವರ್ತಮಾನವನ್ನು ಹಿಡಿಯುತ್ತಿಲ್ಲ. ಅಲ್ಲದೇ ನಾಡಿನ ಪ್ರಮುಖ/ ಗಣ್ಯವ್ಯಕ್ತಿಗಳ/ ವಿದ್ವಾಂಸರ ಮೂಲಕ ಲೇಖನಗಳನ್ನು/ ಭಾಷಣಗಳನ್ನು ಅಥವಾ ಅವುಗಳ ಸಾರಾಂಶವನ್ನಾದರೂ ಕನ್ನಡ ಪತ್ರಿಕೆಗಳಲ್ಲಿ ಪ್ರಕಟಿಸುವ ಕೆಲಸ ನಡೆಯಬೇಕಿದೆ'.[೧೭] ಇದರಿಂದ ಜನರ ಬೌದ್ಧಿಕ ವಿಕಾಸಕ್ಕೆ ದಾರಿಯಾಗುತ್ತದೆ. ಪತ್ರಿಕೆಯೊಂದಕ್ಕೆ ಸಮಾಜದಲ್ಲಿ ಗಣ್ಯವಾದ ಅಧಿಕಾರಯುತ ಸ್ಥಾನ ದೊರೆತು ಜನರ ಅದು ಎಲ್ಲಾ ಕಡೆಗಳಿಂದಲೂ ಪ್ರಯೋಜನಕಾರಿಯಾದ ಸಂಸ್ಥೆಯಾಗಿ ಬೆಳೆಯಲು ಹಲವಾರು ವಿಷಯಗಳಲ್ಲಿ ಶ್ರಮಿಸಬೇಕಾಗಿದೆ. ಅವುಗಳನ್ನು ಸಲಹೆಯ ರೂಪದಲ್ಲಿ ಶಿ. ಶಿ. ಬಸವನಾಳರು ಅಧ್ಯಕ್ಷೀಯ ಭಾಷಣದಲ್ಲಿ ಪ್ರಸ್ತಾಪಿಸಿದ್ದಾರೆ. ಕನ್ನಡ ಭಾಷೆಯಲ್ಲಿ ಪ್ರಾಂತಬೇಧಗಳು ಸಾಕಷ್ಟಿವೆ. ಅವು ಬರವಣಿಗೆಗಿಂತಲೂ ಮಾತಿನಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಆದರೂ ಬರವಣಿಗೆಯಲ್ಲಿ ಅವುಗಳ ಪ್ರಭಾವ ಇದ್ದೇ ಇರುತ್ತದೆ. ಹೀಗೆ ಇಂಗ್ಲೀಷ್‌ನಲ್ಲಿಯೂ ಪ್ರಾಂತ ಭೇದಗಳು ಇಲ್ಲದಿಲ್ಲ. ಆ ಪ್ರಾಂತ ಬೇಧಗಳನ್ನು ಮೀರಿ ಅದು ಕಿಂಗ್ಸ್ ಇಂಗ್ಲೀಷ್ ಎಂಬ ಸಾಮಾನ್ಯ ಭಾಷೆ ಹೇಗೆ ಏರ್ಪಟ್ಟಿತೋ ಕನ್ನಡದಲ್ಲಿಯೂ ಪ್ರಾಂತ ಬೇಧಗಳನ್ನು ಮೀರಿ ನಿಲ್ಲುವ ಒಂದು ಪ್ರಮಾಣ ಭಾಷೆಯನ್ನು ರೂಪಿಸಿ ಕೊಳ್ಳಬೇಕಾಗಿದೆ.'[೧೮] ಇಂತಹ ಭಾಷೆಯು ಪ್ರಸಾರವಾಗಲು ಸಾಹಿತಿಗಳು ಲೇಖಕರು ಎಲ್ಲರೂ ನೆರವಾಗಬೇಕಿದೆ. ಆದರೂ ಇದರ ಮುಖ್ಯ ಜವಾಬ್ದಾರಿ ಪತ್ರಿಕೆಗಳ ಮೇಲೆ ಇರುವುದು. ಹೀಗೆ ಪ್ರಮಾಣ ಭಾಷೆ ಎಂಬುದು ಎಲ್ಲಾ ಭಾಷೆಗಳಲ್ಲಿ ಸಾಮಾನ್ಯವಾದ ಅಂಶಗಳಿಂದ ರೂಪಗೊಳ್ಳಬೇಕು. ಇದರಿಂದ ಕನ್ನಡದ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಏಕೀಕರಣಕ್ಕೆ ತುಂಬಾ ಸಹಾಯಕವಾಗುತ್ತದೆ.

ಜಗತ್ತಿನ ಪ್ರಮುಖ ಪತ್ರಿಕೆಗಳ ಜೊತೆಗೆ ನಮ್ಮ ಪತ್ರಿಕೆಗಳು ಸ್ಪರ್ಧಿಸಲು ಅವುಗಳ ಗುಣ ಮಟ್ಟವನ್ನು ಕಾಯ್ದುಕೊಳ್ಳಬೇಕು. ಹಾಗೆ ಕಾಯ್ದುಕೊಳ್ಳಲು ಸಾಮಾನ್ಯ ಜೀವನಕ್ಕೆ ಸಂಬಂಧಿಸಿದ ವಿಷಯಗಳು ರಾಜಕೀಯ ವಿಷಯಗಳು, ಚಿತ್ರ, ವ್ಯಂಗ್ಯಚಿತ್ರ, ಆಟ, ನೋಟ, ಸಾಹಿತ್ಯ ವಿಮರ್ಶೆ ಸಣ್ಣಕಥೆ ಹಾಗೂ ಕವನಗಳಲ್ಲದೇ ಕೆಲವು ಹೊಸ ಸೇರ್ಪಡೆಗಳನ್ನು ಮಾಡುವುದರ ಮೂಲಕ ಅವುಗಳ ಗುಣಮಟ್ಟವನ್ನು ಹೆಚ್ಚಿಸಬಹುದು[೧೯] ಎನ್ನುತ್ತಾರೆ ಶಿ. ಶಿ. ಬಸವನಾಳರು.

೧. ಪ್ರಾಚೀನ ಕಾವ್ಯ ಪ್ರಪಂಚದಲ್ಲಿ ಪ್ರಸಿದ್ಧವಾದ ಕೃತಿಗಳ ಪರಿಚಯವನ್ನು ಎಲ್ಲರಿಗೂ ಅರ್ಥವಾಗುವ ಸರಳ ಶೈಲಿಯಲ್ಲಿ ಸುಪ್ರಸಿದ್ಧವಾದ ಲೇಖಕರಿಂದ ಬರೆಸಿ ಪ್ರಕಟಿಸಬೇಕು.

೨. ಕರ್ನಾಟಕದ ಇತಿಹಾಸ, ಕರ್ನಾಟಕದ ಶಿಲ್ಪಕಲೆ ಮುಂತಾದ ಮಹತ್ವದ ವಿಷಯಗಳ ಮೇಲೆ ವಿಮರ್ಶಾತ್ಮಕ, ಪರಿಚಯಾತ್ಮಕ ಬೋಧಾತ್ಮಕ ಲೇಖನಗಳನ್ನು ತಜ್ಞರಿಂದ ಬರೆಸಿ ಆಗಾಗ ಪ್ರಕಟಿಸಬೇಕು. ಜೊತೆಗೆ ಅವುಗಳನ್ನು ಕಾಯ್ದುಕೊಂಡು ಹೋಗುವ ಬಗ್ಗೆ ಕೂಡಾ ವಿಚಾರಗಳನ್ನು ಮಂಡಿಸಬೇಕು.

೩. ಆಧುನಿಕ ವಿಜ್ಞಾನಶಾಸ್ತ್ರದ ಮಹತ್ವದ ಅಂಶಗಳು ಸಾಮಾನ್ಯ ಜನರಿಗೆ ತಿಳಿಯುವ ಸುಲಭ ಶೈಲಿಯಲ್ಲಿ ಬರೆದ ಸಾಪೇಕ್ಷತ್ವ ಮನೋವಿಶ್ಲೇಷಣೆ ಮುಂತಾದ ವಿಷಯಗಳಿಗೂ ಪತ್ರಿಕೆಗಳಲ್ಲಿ ಅವಕಾಶ ಕೊಡಬೇಕು.

ಅದೇ ರೀತಿ ಆಧುನಿಕ ಯುದ್ಧ ಕ್ರಮಗಳ ಮಾದರಿಗಳಾದ ಬ್ಲಿಜ್ ಕ್ರೆಗ್, ಜಲಾಂತರ್ಗಾಮಿ ನೌಕಾಯುದ್ಧ (ಈಗಿನ ಯುದ್ಧ ಕ್ರಮಗಳು ತುಂಬಾ ಬದಲಾವಣೆಯನ್ನು ಹೊಂದಿವೆ) ಮುಂತಾದವುಗಳನ್ನು ಕುರಿತ ಲೇಖನಗಳು ಕಲಾ ಹಾಗೂ ವಿಮರ್ಶಾ ಪ್ರಪಂಚದಲ್ಲಿ ಕಾಲಿಡುತ್ತಿರುವ ಸಾಹಿತ್ಯ ಪ್ರಕಾರಗಳ ಬಗ್ಗೆ ಸ್ಮರಣಾನುಸಾರ ಕಥಾಲೇಖನ, ಚಿತ್ರಲೇಖನದ ನೂತನ ರೀತಿಗಳಾದ ಕೂಬಿಜಂ, ಇಂಪ್ರಷನಿಜಂ ಮುಂತಾದ ಪ್ರವೃತ್ತಿಗಳನ್ನು ವಿವರಿಸುವ ಲೇಖನಗಳು ಪ್ರಕಟವಾಗುತ್ತಿರ ಬೇಕು. ಪ್ರಪಂಚದ ರಾಜಕಾರಣದಲ್ಲಿ ತೋರುತ್ತಿರುವ ನೂತನ ಪ್ರವೃತ್ತಿಗಳು ನೂತನ ಜಾಗತಿಕ ರಚನೆ, ಆರ್ಥಿಕ ಆಂದೋಲನ ಮುಂತಾದವುಗಳನ್ನು ವಿವರಿಸುವ ಲೇಖನಗಳು ಸರಳವಾದ ದೈನಂದಿನ ಭಾಷೆಯಲ್ಲಿ ಕನ್ನಡದಲ್ಲಿ ಪ್ರಕಟವಾಗಬೇಕು.

೪. ಕನ್ನಡ ನಾಡಿನ ಭಾರತ ದೇಶದ ಸೃಷ್ಟಿ ಸೌಂದರ್ಯವನ್ನು ವರ್ಣಿಸುವ ಅಂದವಾದ ಲೇಖನಗಳನ್ನು ಪ್ರವಾಸ ವರ್ಣಯುಕ್ತ ಐತಿಹಾಸಿಕ ಹಿನ್ನೆಲೆಯಲೆಯುಳ್ಳ ವಿಷಯಗಳು ಪತ್ರಿಕೆಗಳಲ್ಲಿ ಪ್ರಕಟವಾಗಬೇಕು. ಆಂಗ್ಲ ಭಾಷೆಯ ಸಾಂಸ್ಕೃತಿಕ ಪತ್ರಿಕೆಯಾದ ಜಾನ್ ಓ ಲಂಡನ್ಸ್ ವೀಕ್ಲಿ ಎಂಬುದರ ಅನುಕರಣೆ ಮಾಡುವುದು ಅವಶ್ಯಕವಾಗಿದೆ.

೫. ಪತ್ರಿಕೆಗಳಲ್ಲಿ ಹಾಸ್ಯಕ್ಕು ತಕ್ಕ ಎಡೆ ಇರಬೇಕಾದುದು ಅವಶ್ಯಕ. ಆದರೆ ಈ ಹಾಸ್ಯವು ನಯವಾದ ಹಾಸ್ಯವಾಗಿರಬೇಕು. ಅದು ಅಪಹಾಸ್ಯವಾಗಿರಬಾರದು. ಈ ಹಾಸ್ಯದಿಂದ ಯಾವ ವ್ಯಕ್ತಿಯನ್ನು ನಗೆಗೀಡು ಮಾಡಬಾರದು. ಅದರಿಂದ ತನ್ನ ತಪ್ಪಿನ ಅರಿವಾಗಿ ಪರಿವರ್ತನೆಯಾದಂತೆ ಹಾಸ್ಯ ಹೊರಹೊಮ್ಮಬೇಕು. ಲೇಕಕರು ಹಾಸ್ಯ ಟೀಕಾಕಾರರೂ ವ್ಯಂಗ್ಯ ಚಿತ್ರಕಾರರು ಇಂತಹ ಹಾಸ್ಯವನ್ನು ಬೆಳೆಸಿಕೊಂಡು ಬಳಸತಕ್ಕದ್ದು.

೬. ಪ್ರಸಿದ್ಧರಾದ ಮಹನೀಯರ ಕನ್ನಡಿಗರಾಗಲಿ, ಇನ್ನಿತರರಾಗಲಿ ಗತಕಾಲದವರ ಅಥವಾ ಪ್ರಸ್ತುತ ಕಾಲದವರ ಜೀವನ ಚರಿತ್ರೆಗಳನ್ನಾದರೂ ಅಥವಾ ಜೀವನದ ಪರಿಚಯವನ್ನು ಪತ್ರಿಕೆಗಳು ಮಾಡಿಕೊಡಬೇಕು. ಇಂಥ ಲೇಖನಗಳು ಸೂಕ್ಷ್ಮಾವಲೋಕನಗಳಿಂದ ಕೂಡಿರಬೇಕು.

೭. ವೃತ ಪತ್ರಗಳು ಮತ್ತು ಪತ್ರಿಕೆಗಳ ಪಾತ್ರ ವಯಸ್ಕರಾದ ಪುರುಷರಿಗೆ ಮಾತ್ರ ಮೀಸಲಿರಬೇಕಾಗಿಲ್ಲ ಸ್ತ್ರೀಯರಿಗೂ, ಮಕ್ಕಳಿಗೂ ಹಿಡಿಸುವಂತಹ ವಿಷಯಗಳು ಪತ್ರಿಕೆಗಳಲ್ಲಿರಬೇಕು. ಆದ್ದರಿಂದ ಸ್ತ್ರೀಯರ ಪುಟ, ಮಕ್ಕಳ ಪುಟ, ಶಿಕ್ಷಣ ಪುಟ, ಆರೋಗ್ಯ ವಿಭಾಗ ಶಾರೀರಿಕ ಶಿಕ್ಷಣ ಇತ್ಯಾದಿ ವಿಭಾಗಗಳು

ಆಯಾ ವಿಷಯಗಳು ಕಂಗೊಳಿಸುತ್ತಿರಬೇಕು.

೮. ಹೊಸ ಬರವಣಿಗೆಯನ್ನು ಪ್ರೋತ್ಸಾಹಿಸುವುದಕ್ಕೆ ಪತ್ರಿಕಾ ಸಂಚಾಲಕರು ಕಥೆ, ಕವನ, ನಿಬಂಧ ಮೊದಲಾದವುಗಳಿಗೆ ಸ್ಪರ್ಧೆಯನ್ನು ಇರಿಸುವುದರ ಮೂಲಕ ತಜ್ಞರ ಪರೀಕ್ಷಾ ಮಂಡಳಿಯನ್ನೆ ಪ್ರತ್ಯೇಕವಾಗಿ ನಿರ್ಮಿಸಬೇಕು. ಇದರಿಂದ ಉದಯೋನ್ಮುಖ ಬರಹಗಾರರು ಕಾಣಿಸಿಕೊಳ್ಳಲಿಕ್ಕೆ ಸಹಕಾರಿಯಾಗುತ್ತದೆ. ಬರವಣಿಗೆಯು ಉದಾತ್ತವಾದಂತೆ ಲಾಭದಾಯಕ ಎಂಬ ಕಲ್ಪನೆ ಹಾಗೂ ಅನುಭವ ಅವರಿಗೆ ಮುಖ್ಯವಾಗುತ್ತದೆ.

೯. ಪತ್ರಿಕೆಗಳಿಗಾಗಿ ಬರೆಯುವ ಲೇಖಕರಿಗೆ ಸಂಪಾದಕರು ಫತಿಫಲವನ್ನು ಹಣದ ರೂಪದಲ್ಲಿ ಕೊಡಬೇಕು. ಇದು ಕೇವಲ ಕೆಲವು ಖ್ಯಾತ ಲೇಖಕರಿಗೆ ಮಾತ್ರ ಹೀಗೆ ಕೊಡಲಾಗುತ್ತದೆ. ಈ ರೀತಿಯ ಪ್ರತಿಫಲಗಳು ಸಾರ್ವತ್ರಿಕವಾಗಬೇಕು.

೧೦. ಮನಸ್ಸಿಗೆ ಅಮೋದಕರವಾಗುವಂತಹ ಬುದ್ದಿಗೆ ಲಲಿತ ಶ್ರಮವೆಂಬಂತೆ ಇರುವ ಒಗಟುಗಳನ್ನು ಪ್ರಕಟಗೊಳಿಸಬಹುದು ಮತ್ತು ಪ್ರಕಟಣೆಗಳನ್ನು ಪ್ರಕಟಿಸುವುದರಿಂದ ಅವುಗಳಿಂದ ಬರುವ ಆದಾಯವನ್ನೇ ಪತ್ರಿಕೆಗಳ ವೃದ್ಧಿಗೆ ಬಳಸಬಹುದು.

೧೧. ಹಬ್ಬಗಳ ಸಂದರ್ಭದಲ್ಲಿ ವಿಶೇಷ ಸಂಚಿಕೆಯನ್ನು ನಿಯಮಿತ ಕಾಲಕ್ಕೆ ಹೊರಡಿಸಬೇಕು. ಇಂತಹ ವಿಶೇಷ ಶ್ರಮದ ಫಲವಾಗಿರುತ್ತವೆ.

ಈ ಎಲ್ಲಾ ಅಂಶಗಳನ್ನು ಸೇರ್ಪಡೆ ಮಾಡುವುದರಿಂದ ಪತ್ರಿಕೆಗಳ ಗುಣ ಮಟ್ಟವನ್ನು ಸುಧಾರಿಸ ಬಹುದಾಗಿದೆ.[೨೦] ಹೀಗೆ ವರ್ತಮಾನ ಪತ್ರಿಕೆಗಳು ಸಮಾಜವನ್ನು ಬೆಳೆಸುವುದರ ಮೂಲಕ ತಾವೂ ಬೆಳೆಯುತ್ತವೆ. ಸಾಹಿತ್ಯ ವೃದ್ಧಿಗೂ ಸಹಾಯ ಮಾಡುತ್ತಿವೆ. 'ಹೀಗೆ ಎಲ್ಲಾ ಪತ್ರಿಕೆಗಳು ಉತ್ತಮ ಗುಣಮಟ್ಟದಲ್ಲಿ ಬರುತ್ತಿವೆ. ಎಂದು ಹೇಳುವಂತಿಲ್ಲ. ಕೆಲವು ಪತ್ರಿಕೆಗಳು ಮಾರಾಟದ ದೃಷ್ಟಿಯಿಂದ ಅನುಚಿತ ಕಥೆಗಳು ಅನುಚಿತ ಚಿತ್ರಗಳನ್ನು ಇತರ ವಿಷಯಗಳನ್ನು ಪ್ರಕಟಿಸಿ ಜನರ ಅಭಿರುಚಿಯನ್ನು ಕೆಡಿಸುವ ಕೆಲಸಗಳನ್ನು ಮಾಡುತ್ತಿವೆ. ಗ್ರಂಥ ವಿಮರ್ಶನ ಕಾರ್ಯವನ್ನು ಸಂಪಾದಕ ಮಂಡಳಿಯವರು ಮಾಡುತ್ತಿದ್ದಾರೆ.'[೨೧] ಆದರೆ ಸಾಹಿತ್ಯ ಪಂಗಡವನ್ನು ಬೆಳೆಸುವ ಜವಾಬ್ದಾರಿ ಪತ್ರಿಕೆಗಳಿಗಿದೆ. ಆದ್ದರಿಂದ ವಿಮರ್ಶಕಾರರಿಗೆ ಈ ಸಂದರ್ಭದಲ್ಲಿ ಅವಕಾಶ ಕೊಡುವುದು ಅನಿವಾರ್ಯವಾಗಿದೆ. ಮಾತು ಕೇವಲ ಸಾಹಿತ್ಯಕ್ಕೆ ಮಾತ್ರ ಅಲ್ಲದೇ ಲೌಕಿಕ ಜೀವನದಲ್ಲಿಯೂ ಅವಶ್ಯಕ. ಪತ್ರಿಕೆಗಳು ಈ ಕಾರ್ಯವನ್ನು ನಿರ್ಧರಿಸುತ್ತವೆ. ಭಾಷಾ ಪತ್ರಿಕೆಗಳೇ ಜನಶಿಕ್ಷಣಕ್ಕೆ ಮುಖ್ಯ ಸಾಧನ. ಅವುಗಳ ಭವಿಷ್ಯ ಹಿರಿದು. ಈಗ ಅವರ ಕೆಲಸ ಕಷ್ಟ. ಅವರ ಅಗತ್ಯ ಅವಸರದ್ದು. ಆದ್ದರಿಂದ ಅವರ ಎಲ್ಲಾ ಅಗತ್ಯಕ್ಕೂ ಒದಗುವ ಪರಿಭಾಷಾ ಕೋಶವೊಂದು ರಚಿತವಾಗುವುದು ಅವಶ್ಯವಾಗಿದೆ.[೨೨] ಬರವಣಿಗೆಯನ್ನು ನಂಬಿಕೊಂಡು ಜೀವನ ಮಾಡುವವರ ಪಾಡು ತುಂಬಾ ಕಷ್ಟಕರವಾಗಿದೆ. ಅವರಿಗೆ ಸರಿಯಾದ ಸಂಭಾವನೆಯು ದೊರೆಯದಿರುವುದು ಪ್ರಕಾಶಕರಿಂದ ಪ್ರಕಾಶಕರಿಗೆ ಅಮಾನ್ಯ ಯಾತ್ರೆ ಮಾಡಿ ಆತಂಕಪಡುವ ಪ್ರಸಂಗ ಒದಗುತ್ತಿದ್ದರೆ ಲೇಖನ ವೃತ್ತಿ ಹೇಗೆ ಬೆಳೆಯುತ್ತದೆ? ಪತ್ರಕರ್ತನು ತನ್ನ ಪತ್ರಿಕೆಯ ಪುಟಗಳನ್ನು ತುಂಬಿಸುವುದರ ಸಲುವಾಗಿ ಕ್ಷುಲ್ಲಕವಾದ ಬರಹಗಳಿಗೆ ಅವಕಾಶವನ್ನು ಕೊಟ್ಟು ಪ್ರಾಮಾಣಿಕವಾಗಿ ಬರೆಯುವವರಿಗೆ ಅವಕಾಶವನ್ನೆ ಕೊಡುವುದಿಲ್ಲ.

ಎಲ್ಲವು ತಾನು ಕೊಟ್ಟ ಸಮಯದಲ್ಲಿ ಬರೆಯಬೇಕು ಇಲ್ಲವಾದಲ್ಲಿ ಅವಕಾಶವಿಲ್ಲ. ಆದ್ದರಿಂದ ಪತ್ರಕರ್ತನು ಸಾಹಿತಿಯ ಶತ್ರು ಆಗಿದ್ದಾನೆ.[೨೩] ಈ ಹಿಂದಿನ ಪತ್ರಿಕಾ ವಿಷಯಕ್ಕೆ ಸಂಬಂಧಪಟ್ಟ ಪ್ರಸ್ತಾಪಕ್ಕೂ ಈಗ ಪ್ರಸ್ತಾಪಿಸುತ್ತಿರುವ ವಿಷಯದ ಕಾಲಕ್ಕಾಗಲೇ ಪತ್ರಿಕೆಗಳ ಬಗೆಗಿನ ಅಭಿಪ್ರಾಯದಲ್ಲಿ ಪಲ್ಲಟಗಳು ಉಂಟಾಗಿರುವುದನ್ನು ಗಮನಿಸಬಹುದು. ಮಾಸಿಕ, ನಿಯತ ಕಾಲಿಕೆಗಳು ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲು ಹೆಣಗಾಡುವಂತಾಗಿದೆ. ಅವುಗಳ ಬಾಳಿಗೆ ಭದ್ರತೆಯಿಲ್ಲದಂತಾಗಿದೆ. ಚಿತ್ರರಂಜಿತವಾಗಿದ್ದರೆ ವಿವಿಧ ವಿಷಯಾಲಂಕೃತವಾಗಿದ್ದರೆ, ಮಕ್ಕಳ, ಮುದುಕರ, ರೋಗಿಗಳ–ಭೋಗಿಗಳ, ಆಕಾಶದ ನಕ್ಷತ್ರಗಳ ಚಿತ್ರದ ತಾರಾಗಣಗಳ, ಸುಖ–ದುಃಖ ವಾರ್ತೆಗಳನ್ನು ಒಳಗೊಂಡಿದ್ದರೆ ಮಾತ್ರ ಬದುಕುವ ನಂಬಿಕೆಯನ್ನು ಇಟ್ಟುಕೊಳ್ಳುವುದು. ಆದರೆ ದಿನಪತ್ರಿಕೆಗಳಿಗೆ ಒಳ್ಳೆಯ ಭವಿಷ್ಯವಿದೆ. ಅವುಗಳ ಮೂಲಕ ವಿಶ್ವದ ಎದೆಬಡಿತ ಜನರ ಕಿವಿಗೆ ಕೇಳಿಸುತ್ತದೆ.[೨೪] ಪ್ರಪಂಚದ ಪ್ರಚಲಿತ ವಿದ್ಯಮಾನಗಳು ಪತ್ರಿಕೆಗಳ ಮೂಲಕ ಜನರ ಕುತೂಹಲವನ್ನು ಕೆರಳಿಸುತ್ತದೆ.

ಮುಂಜಾವಿನ ಗಾಳಿ ಬೆಳಕುಗಳ ಮೂಲಕ ಪತ್ರಿಕೆಗಳು ಹೊಸ ಸುದ್ದಿಗಳ ಮೂಲಕ ಮನೆಯಲ್ಲಿ ಪ್ರವೇಶಿಸುತ್ತವೆ. ಇಂಥ ಪತ್ರಿಕೆಗಳು ತಮ್ಮ ಜವಾಬ್ದಾರಿಯನ್ನು ಸರಿಯಾಗಿ ನಿಭಾಯಿಸಬೇಕಾದುದು ಅವಶ್ಯಕ. ಆದರೂ ಪತ್ರಿಕೆಗಳಲ್ಲಿ ಭಾಷಾದೋಷಗಳು ಕಂಡುಬರುತ್ತವೆ. ಇವುಗಳನ್ನು ಸುಧಾರಿಸಿಕೊಂಡಲ್ಲಿ ಗುಣಮಟ್ಟ ಸುಧಾರಿಸಬಹುದು. 'ಆಂಗ್ಲ ಭಾಷೆಯ ಮೂಲಕವೇ ಪ್ರಪಂಚದ ಇತರೆ ಸುದ್ದಿಗಳೆಲ್ಲವೂ ತಿಳಿಯುತ್ತವೆ. ಈ ಸಂದರ್ಭದಲ್ಲಿ ಎಚ್ಚರಿಕೆಯಿಂದ ಭಾಷಾಂತರ ಕಾರ್ಯ ನಡೆಯುವುದು ಮುಖ್ಯವಾಗಿದೆ. ಅಸಾಮಾನ್ಯರ ಒಂದು ವರ್ಗಕ್ಕೆ ಭಾವ ಮತ್ತು ಬೌದ್ಧಿಕ ವಿಕಾಸಗೊಳಿಸುವ ಶಿಕ್ಷಕನ ರೀತಿಯಲ್ಲಿ ಈ ಪತ್ರಿಕೆಗಳು ಕಾರ್ಯ ನಿರ್ವಹಿಸುವುದು ಪ್ರಮುಖವಾಗಿದೆ. ಆಧುನಿಕತೆಗೆ ತಕ್ಕಂತೆ ಶಾಸ್ತ್ರ ಜ್ಞಾನಗಳಿಗೆ ತಕ್ಕಂತೆ ಪತ್ರಿಕೆಗಳು ತಮ್ಮ ಪಾತ್ರವನ್ನು ವಹಿಸಬೇಕಾಗುತ್ತದೆ.

ಹೀಗೆ ಪತ್ರಿಕೆಗಳ ಬಗ್ಗೆ ಅಧ್ಯಕ್ಷರುಗಳು ತಮ್ಮ ಅಭಿಪ್ರಾಯಗಳನ್ನು/ವಿಚಾರಗಳನ್ನು ಮಂಡಿಸಿದ್ದಾರೆ/ ಪ್ರಸ್ತಾಪಿಸಿದ್ದಾರೆ. ಆದರೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಪತ್ರಿಕಾ ವ್ಯವಸಾಯದಲ್ಲಿ ಲೇಖಕರು, ಸಂಪಾದಕರು, ಮುದ್ರಣಕಾರರು ಇವರಂತೆ ಮಾಧ್ಯಮ ವರದಿಗಾರರು ಸುದ್ದಿ ಸಂಪಾದಕರು ಕೂಡಾ ಪ್ರಮುಖವಾಗಿದ್ದಾರೆ. ಅಧ್ಯಕ್ಷರು/ಭಾಷಣಕಾರರು ಇವರ ಬಗ್ಗೆಯೂ ತಮ್ಮ ಗಮನ ಹರಿಸಿದಿದ್ದರೆ ಚೆನ್ನಾಗಿರುತ್ತಿತ್ತು.

ಅಡಿಟಿಪ್ಪಣಿಗಳು

೧. ಪು.ಸಂ. ೧೦೧, ಸಂ.೧

೨. ಪು.ಸಂ. ೧೪೭, ಸಂ.೧

೩. ಪು.ಸಂ. ೩೭೫, ಸಂ.೧

೪. ಪು.ಸಂ. ೪೩, ಕನ್ನಡ ಜಗತ್ತು ಅರ್ಧಶತಮಾನ

೫. ಪು.ಸಂ. ೧೦೯, ಕೆ. ಅನಂತರಾಮರಾವ್

೬. ಪು.ಸಂ. ೨೧೭, ಸಂ.೧

೭. ಪು.ಸಂ. ೨೧೮, ಸಂ.೧

೮. ಪು.ಸಂ. ೨೧೯, ಸಂ.೧

೯. ಪು.ಸಂ. ೧೯೫, ಸಂ.೨

೧೦. ಪು.ಸಂ. ೧೧೦, ಸಂ.೩

೧೧. ಪು.ಸಂ. ೨೯೨, ಸಂ.೧

೧೨. ಪು.ಸಂ. ೬೬೭, ಕೆ. ಅನಂತರಾಮರಾವ್

೧೩. ಪು.ಸಂ. ೬೬೮, ಕೆ. ಅನಂತರಾಮರಾವ್

೧೪. ಪು.ಸಂ. ೨೦೭, ಸಂ.೨

೧೫. ಪು.ಸಂ. ೨೦೭, ಸಂ.೨

೧೬. ಪು.ಸಂ. ೨೦೮, ಸಂ.೨

೧೭. ಪು.ಸಂ.೨೧೯, ಸಂ.೨

೧೮. ಪು.ಸಂ. ೨೬೮, ಸಂ.೨

೧೯. ಪು.ಸಂ. ೨೬೮, ಸಂ.೨

೨೦. ಪು.ಸಂ. ೨೬೮, ಸಂ.೨

೨೧. ಪು.ಸಂ. ೪೮೩, ಸಂ.೨

೨೩. ಪು.ಸಂ. ೨೫, ಸಂ.೩

೨೪. ಪು.ಸಂ. ೯೨, ಸಂ.೩

೨೫. ಪು.ಸಂ. ೩೭೦, ಸಂ.೩

**ಅಧ್ಯಾಯ: ಆರು**

## ಗಡಿನಾಡ ಮತ್ತು ಹೊರನಾಡ ಕನ್ನಡಿಗರನ್ನು ಕುರಿತ ಚಿಂತನೆ

ಕನ್ನಡ ಸಾಹಿತ್ಯ ಸಮ್ಮೇಳನಗಳು ನಾಡಿನ ಒಳಗೆ ಹೊರಗೆ ಮತ್ತು ಗಡಿಭಾಗಗಳಲ್ಲಿ ನಡೆದಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಅಲ್ಲಿನ ಜನಜೀವನದ ಬಗ್ಗೆ ಅವರ ಸಮಸ್ಯೆಗಳ ಬಗ್ಗೆ ಈ ಸಮ್ಮೇಳನಗಳಲ್ಲಿ ಹೇಗೆ ಚರ್ಚಿಸಿದ್ದಾರೆ, ಆ ಮೂಲಕ ಸಮಸ್ಯೆಗಳಿಗೆ ಪರಿಹಾರವನ್ನು ಹೇಗೆ ಸೂಚಿಸಿದ್ದಾರೆ, ಗಡಿಭಾಗದ ಯಾವ ಪ್ರದೇಶಗಳಿಗೆ ಹೆಚ್ಚಿನ ಮನ್ನಣೆಯನ್ನು ನೀಡಿದ್ದಾರೆ ಎಂಬಿತ್ಯಾದಿ ಪ್ರಶ್ನೆಗಳ ಮೂಲಕ ಈ ಭಾಗದ ಅಧ್ಯಯನವನ್ನು ಮಾಡಲಾಗಿದೆ. ಮೊದಲಿಗೆ ಕನ್ನಡಿಗರು ಮತ್ತು ಹೊರನಾಡ ಕನ್ನಡಿಗರು ಎಂದರೆ ಯಾರು ಎಂಬುದನ್ನು ತಿಳಿದುಕೊಳ್ಳಬಹುದು.

'ಗಡಿನಾಡು ಎಂಬುದು ವಿಶಿಷ್ಟವಾದ ವಲಯ. ಭೌಗೋಳಿಕವಾಗಿ ಒಂದು ನಿರ್ದಿಷ್ಟ ರಾಜ್ಯದ ಕಟ್ಟಕಡೆಯ ಪ್ರದೇಶಗಳನ್ನು ಗಡಿನಾಡೆಂದು ಗುರುತಿಸಲಾಗುತ್ತಿದೆ.'[೧]

'ಗಡಿನಾಡೆಂದರೆ ಎರಡು ಭಾಷೆಗಳು, ಎರಡು ಸಂಸ್ಕೃತಿಗಳ ಎರಡು ಸರ್ಕಾರಗಳ ನೆಲೆಯಲ್ಲಿ ರೂಪಗೊಂಡ ಬದುಕು.'[೨]

ಇಂಥ ಪ್ರದೇಶಗಳಲ್ಲಿ ಕನ್ನಡ ಭಾಷೆಯನ್ನು ಆಡುವಂಥ ಜನರನ್ನು ಗಡಿಭಾಗದ ಕನ್ನಡಿಗರು ಎಂದು ಹೇಳಬಹುದು. ಕನ್ನಡಿಗರೆಂದು ಗುರುತಿಸಿಕೊಳ್ಳುವವರಲ್ಲಿ ಕನ್ನಡದ ಬಗೆಗಿನ ಅರಿವು ಎಚ್ಚರ ಅಭಿಮಾನ ಅಷ್ಟೇ ಅಲ್ಲ ಕನ್ನಡತನವನ್ನು ಉಳಿಸಿಕೊಂಡು ಬೆಳೆಸಿಕೊಂಡು ಹೋಗುವ ಗುಣವಿರಬೇಕಾದುದು ತುಂಬಾ ಮುಖ್ಯವೆನಿಸುತ್ತದೆ.

'ಒಂದು ಭಾಷೆಯನ್ನಾಡುವ ಜನ ಒಂದೇ ಪ್ರದೇಶದಲ್ಲಿ ಇರಬೇಕೆಂಬ ನಿರ್ಬಂಧವೇನೂ ಇಲ್ಲ. ಒಂದೇ ಪ್ರದೇಶದಲ್ಲಿ ಹತ್ತಾರು ಭಾಷೆಯನ್ನಾಡುವ ಭಾಷಿಕರು ಸಿಗುತ್ತಾರೆ'.[೩] ಹೀಗೆ ಕರ್ನಾಟಕದ ಆಚೆಗೂ ಹಲವಾರು ಜನ ಕನ್ನಡಿಗರು ಜೀವಿಸುತ್ತಿರುವುದು ಕಂಡುಬರುತ್ತಿದೆ. ಇಂಥವರನ್ನು ಹೊರನಾಡ ಕನ್ನಡಿಗರು ಎಂದು ಹೇಳಬಹುದಾಗಿದೆ. ಈ ಸಂದರ್ಭದಲ್ಲಿ ಮತ್ತೊಂದು ಪ್ರಶ್ನೆಯನ್ನು ಹಾಕಿಕೊಳ್ಳಬಹುದಾಗಿದೆ. ಅದೇನೆಂದರೆ ಕರ್ನಾಟಕದ ಗಡಿ ಎಂಬುದು ಎಲ್ಲಿಂದ ಎಲ್ಲಿಯವರೆಗಿದೆ? ಈ ಪ್ರಶ್ನೆಗೆ ಉತ್ತರವನ್ನು ಹುಡುಕುವುದಾದರೆ ೯ನೇ ಶತಮಾನದ ಕವಿರಾಜಮಾರ್ಗದಲ್ಲಿ ಕನ್ನಡನಾಡು ದಕ್ಷಿಣದ ಕಾವೇರಿಯಿಂದ ಉತ್ತರದ ಗೋದಾವರಿಯವರೆಗೆ ಹಬ್ಬಿತ್ತು ಎಂಬುದು ತಿಳಿದುಬರುತ್ತದೆ. ಆದರೆ ಇಂದಿನ ಕರ್ನಾಟಕದ ಉತ್ತರದ ಗಡಿಯಿಂದ ನಲವತ್ತು ಮೈಲು ಆಚೆ ಗೋದಾವರಿ ನದಿ ಹರಿಯುತ್ತಿದೆ'.[೪]

ಈ ಮೇಲೆ ದೊರೆತ ಮಾಹಿತಿಯ ಪ್ರಕಾರ ಹೇಳುವುದಾದರೆ ಇಂದಿನ ಕರ್ನಾಟಕವು ಉತ್ತರ ಗಡಿಯಿಂದ ನಲವತ್ತು ಮೈಲುಗಳಷ್ಟು ಸಂಕುಚಿತಗೊಂಡಿದೆ. ಇದಕ್ಕೆ ಏನು ಕಾರಣಗಳಿರಬಹುದು? ನಮ್ಮ ಸಾಹಿತ್ಯ ಸಮ್ಮೇಳನಾಧ್ಯಕ್ಷರ ಪ್ರಕಾರ ಹೇಳುವುದಾದರೆ ೧೯೫೬ರಲ್ಲಿ ಪ್ರಾಂತ್ಯ ಪುನರ್‌ವಿಂಗಡನೆ ನಡೆಯಿತು. ಈ ವಿಂಗಡನೆಯ ಫಲವಾಗಿ ೩೫ ಲಕ್ಷ ಪ್ರಜಾಸಂಖ್ಯೆಯುಳ್ಳ ೭,೦೦೦ ಚದುರ ಮೈಲುಗಳಷ್ಟು ವಿಸ್ತೀರ್ಣ ಪ್ರದೇಶ ಆಂದ್ರ, ಮುಂಬೈ (ಚಂದಘಟ) ಮಹಾರಾಷ್ಟ್ರ, ಮದರಾಸು, ಕೇರಳ ಪ್ರಾಂತ್ಯಗಳಿಗೆ ಸೇರಿತು.'[೫]

ಕೇವಲ ಪ್ರಾಂತ್ಯ ಪುನರ್ ವಿಂಗಡನೆ ಕಾರ್ಯದಿಂದ ಮಾತ್ರವಲ್ಲದೇ ನೆರೆಯ ರಾಜ್ಯಗಳ ಆಕ್ರಮಣ ದಾಹ ಒತ್ತಿಕೊಂಡು ಬರುವ ಗುಣಗಳು ನಮ್ಮ ಕರ್ನಾಟಕವು ಸಂಕುಚಿತಗೊಳ್ಳಲಿಕ್ಕೆ ಕಾರಣವಾಯಿತೆನ್ನಬಹುದು.

ಇಲ್ಲಿ ಇಂತಹ ಸಂದರ್ಭದಲ್ಲಿ ಕನ್ನಡಿಗರ ಪಾತ್ರವೇನು ಎಂದು ಪ್ರಶ್ನಿಸಿಕೊಳ್ಳಬಹುದು. 'ಯಾವುದೇ ರಾಜ್ಯದ ಗಡಿಭಾಗಕ್ಕೆ ಹೋದರೆ ಅಲ್ಲಿಯ ಜನ ದ್ವಿಭಾಷಿಕರಾಗುತ್ತಿರುವುದು ಸಹಜ.'[೬] ಅವರು ಪೂರ್ತಿಯಾಗಿ ಯಾವ ರಾಜ್ಯಕ್ಕೆ ಸಲ್ಲುವವರು ಎಂಬುದೇ ದೊಡ್ಡ ಸಮಸ್ಯೆಯಾಗಿರುತ್ತದೆ. ಅವರ ದಿನನಿತ್ಯದ ವ್ಯವಹಾರಗಳು ಆಡಳಿತ ಪತ್ರಗಳು ಇತ್ಯಾದಿಗಳೆಲ್ಲವಕ್ಕೆ ಬಳಸುವ ಭಾಷೆಯಲ್ಲಿಯೂ ಗೊಂದಲಮಯ ವಾತಾವರಣವೇ ತುಂಬಿಕೊಂಡಿರುತ್ತದೆ.

ಅಲ್ಲಿನ ಶಿಕ್ಷಣ ಪದ್ಧತಿಯೂ ಸಹ ಅವರ ಆಯ್ಕೆಯ ಮೇರೆಗೆ ಇರುವುದಿಲ್ಲ. ಕರ್ನಾಟಕದ ಅನೇಕ ಭಾಗಗಳಲ್ಲಿ ಪ್ರಾಥಮಿಕ ಕನ್ನಡ ಶಾಲೆಗಳು ಇಲ್ಲದಿರುವುದರಿಂದ ಅಕ್ಷರ ಜ್ಞಾನಪ್ರಸಾರಕ್ಕೆ ತುಂಬಾ ತೊಂದರೆಯಾಗುತ್ತಿರುವುದು ಬಹಳಷ್ಟು ಕನ್ನಡಿಗರು ಈ ಸಂದರ್ಭದಲ್ಲಿ ತಮ್ಮ ಮಾತೃ ಭಾಷೆಯನ್ನು ತೊರೆದು ಪರಭಾಷೆನ್ನು ಕಲಿಯುವ ಅತಂತ್ರ ಸ್ಥಿತಿಯಲ್ಲಿದ್ದಾರೆ. 'ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು ಸೊಲ್ಲಾಪುರ ಜಿಲ್ಲೆ, ಹೈದ್ರಾಬಾದ್ ಸಂಸ್ಥಾನ, ಮದರಾಸ್ ಇಲಾಖೆಯ ಬೇರೆ ಬೇರೆ ಭಾಗಗಳಲ್ಲಿ ಈ ಸ್ಥಿತಿ ತೋರಿ ಬರುತ್ತಿದೆ'[೭] ಎಂದು ಫ.ಗು. ಹಳಕಟ್ಟಿಯವರು ತಮ್ಮ ಭಾಷಣದಲ್ಲಿ ಹೇಳಿರುವುದನ್ನು ಗಮನಿಸಬಹುದಾಗಿದೆ.

ಹೀಗೆ ಪೂರ್ತಿಯಾಗಿ ಗೊಂದಲಮಯ ವಾತಾವರಣದಲ್ಲಿ ಇರುವುದನ್ನು ಮರೆಯುವಂತಿಲ್ಲ. ಈ ಸಂದರ್ಭದಲ್ಲಿ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳವರ ಒಂದು ಮಾತನ್ನು ಇಲ್ಲಿ ನೆನೆಯಬಹುದಾಗಿದೆ. ಬಳ್ಳಾರಿಯಲ್ಲಿ ತೆಲುಗಿನ ಪ್ರಭಾವ, ಅತ್ತ ಮಹಾರಾಷ್ಟ್ರದ ಗಡಿಯಲ್ಲಿ ಮರಾಠಿಯ ಆಕ್ರಮಣ, ಇತ್ತ ಕೊಳ್ಳೆಗಾಲದ ಕಡೆಗೆ ತಮಿಳರ ಆಕ್ರಮಣ ಹೀಗೆ ಜನಗಣತಿಯ ಕಾಲಕ್ಕೆ ಗಡಿನಾಡಿನ ಜನರಿಗೆ ತಾವು ಕನ್ನಡಿಗರೆಂದು ಹೇಳಿಕೊಳ್ಳುವ ಧೈರ್ಯವು ಕೂಡಾ ಇರುವುದಿಲ್ಲ.[೮] ಇಂಥದ್ದರಲ್ಲಿ ಕನ್ನಡಕ್ಕಾಗಿ ಹೋರಾಡಿದ ಮಾತು ಧ್ವನಿ ಅಡಗಿದ ತುಟ ಚಲನೆಯಂತಿರುತ್ತದೆ ಎಂದರೆ ತಪ್ಪಾಗಿ ಭಾವಿಸಬೇಕಾದ್ದಿಲ್ಲ. ಹಾಗೆಯೇ ಗಡಿಭಾಗದ ಕನ್ನಡಿಗರಿಂದಲೂ ಕನ್ನಡದ ಮಹತ್ತರ ಸೇವೆ ನಡೆದಿರುವುದು ನಡೆಯುತ್ತಿರುವುದು ಮರೆಯುವಂತಿಲ್ಲ. ಆದರೆ ಕರ್ನಾಟಕ ಒಳಭಾಗದ ಜನರು ಪಡೆಯುವ ಅವಕಾಶಗಳನ್ನು ಸೌಲಭ್ಯಗಳನ್ನು ಗಡಿಭಾಗದ ಕನ್ನಡಿಗರು ಪಡೆಯುತ್ತಿಲ್ಲ. ಅವಕಾಶ ವಂಚಿತರಾಗಿ ಜೀವನವನ್ನು ನಡೆಸುತ್ತಿದ್ದಾರೆ.

ಕರ್ನಾಟಕದ ಮೂರು ಕಡೆಗಳಲ್ಲಿಯೂ ಅವಸ್ಥೆ ಶೋಚನೀಯವಾಗಿದೆ. ರಾಜ್ಯದ ಪುನರ್‌ವಿಂಗಡನೆಯ ನಂತರ ಕರ್ನಾಟಕದ ಹಲವು ಪ್ರದೇಶಗಳು ಹೊರಗೆ ಉಳಿದುಕೊಂಡವು. 'ಸೊಲ್ಲಾಪುರ, ಜತ್ತ, ಅಕ್ಕಲಕೋಟೆ, ಮೀರಜ್, ಸಾಂಗ್ಲಿ, ಕಾಸರಗೂಡು, ನೀಲಗಿರಿ, ಅನಂತಪುರ, ಕರ್ನೂಲ ಮೊದಲಾದ ಗಡಿ ಪ್ರದೇಶಗಳಲ್ಲಿರುವ ಕನ್ನಡಿಗರು ನಮ್ಮ ರಾಜ್ಯದಲ್ಲಿ ಸೇರಿಕೊಳ್ಳಲು ಕಾತರರಾಗಿದ್ದಾರೆ. ಈ ವಿಷಯದಲ್ಲಿ ಹಲವಾರು ಭಾವೋದ್ರಿಕ್ತ ಸನ್ನಿವೇಶಗಳು ಕಂಡುಬಂದಿವೆ. ಅದಕ್ಕಾಗಿ ಉಭಯ ರಾಜ್ಯಗಳು ಶಾಂತಚಿತ್ತರಾಗಿ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕು.'[೯] ಹೀಗೆ ನವರಾಜ್ಯದ ಉದಯದ ನಂತರ ಹೊರಗುಳಿದ ಹಲವಾರು ಪ್ರದೇಶಗಳು ಕರ್ನಾಟಕಕ್ಕೆ ಬಂದು ಸೇರುವ ಹವಣಿಕೆಯಲ್ಲಿರುವುದನ್ನು ಕಾಣಬಹುದಇಲ್ಲಿನ

ಭಾಷೆಯೊಂದಿಗೆ ನೆಲ, ಜಲ, ಇತ್ಯಾದಿಗಳೊಂದಿಗೆ ಒಂದು ರೀತಿಯ ಭಾವನಾತ್ಮಕವಾದ ಸಂಬಂಧವನ್ನು ಬೆಳೆಸಿಕೊಂಡಿದ್ದನ್ನು ಇಲ್ಲಿ ಗುರುತಿಸಬಹುದು. ಹಲವು ವರ್ಷಗಳಿಂದ ಬಾಳಿ ಬದುಕಿ ತಮ್ಮ ಸಂಸ್ಕೃತಿಯನ್ನು ಇಲ್ಲಿಂದಲೇ ಪಡೆದವರಾಗಿದ್ದು, ಈ ರೀತಿಯ ರಾಜಕೀಯ ತೀರ್ಮಾನಗಳಿಂದ ಅತಂತ್ರವಾದ ಪರಿಸ್ಥಿತಿಯಲ್ಲಿ ಬದುಕಬೇಕಾದುದು ಇಂದಿಗೂ ಅನಿವಾರ್ಯವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಕೆಲವು ನೆರೆಹೊರೆಯ ರಾಜ್ಯಗಳು ರಾಜಕೀಯ ಕೈವಾಡದಿಂದಾಗಿ ಒತ್ತಾಯ ಪೂರ್ವಕವಾಗಿ ಗಡಿಭಾಗದ ಪ್ರದೇಶಗಳನ್ನು ಹೊಂದಿಸಿಕೊಳ್ಳುವ ಪ್ರಯತ್ನವನ್ನು ಮಾಡಿರುವುದು ಮತ್ತು ಮಾಡುತ್ತಿರುವುದು ಗಮನಿಸಬಹುದು. ಉದಾ: ಬೆಳಗಾವಿ, ಕಾಸರಗೂಡು ಇತ್ಯಾದಿ ಪ್ರದೇಶಗಳ ಬಗೆಗಿನ ಸ್ಥಿತಿಗತಿಗಳ ಪುನರ್ವಿಂಗಡನೆಗಾಗಿ ವಿವಿಧ ರಾಜ್ಯಗಳ ನಡುವೆ ಕಿತ್ತಾಟಗಳು ನಡೆಯುತ್ತಿದ್ದರೂ ಪರಿಹಾರೋಪಾಯಕ್ಕೆ ಮೂಲ ಭೂಮಿಕೆಯಾಗುವ ಗಡಿನಾಡು ರಾಷ್ಟ್ರೀಯ ನೀತಿಯೊಂದು ರೂಪಗೊಂಡಿಲ್ಲ.[೧೦]

ಗಡಿಭಾಗಗಳಲ್ಲಿ ಹಲವು ಸಾಹಿತ್ಯ ಸಮ್ಮೇಳನಗಳು ನಡೆದಿವೆ. (ಮೂರು ಸಂಪುಟಗಳನ್ನು ಅನುಲಕ್ಷಿಸಿ) ಇಂತಹ ಸಂದರ್ಭದಲ್ಲಿ ಈ ವಿಷಯದ ಬಗ್ಗೆ ಎಲ್ಲರ ಅಭಿಪ್ರಾಯಗಳು ಏಕ ತೆರನಾಗಿಯೇ ಕಂಡುಬರುತ್ತವೆ. ರಾಜ್ಯ ಪುನರ್ವಿಂಗಡಣೆಯ ಸಂದರ್ಭದಲ್ಲಿ ಕರ್ನಾಟಕದ ಮತ್ತೊಂದು ಪ್ರದೇಶವಾದ 'ಗೋವಾ' ಬಗ್ಗೆ ಕೆಲವರು ಚರ್ಚೆಯನ್ನು ಮಾಡಿದ್ದಾರೆ. ಮೊದಲಿಗೆ ಗೋವಾ ಕರ್ನಾಟಕವನ್ನು ಆಳಿದ ರಾಜರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದಕ್ಕೆ ಕೆ.ಜಿ. ಕುಂದಣಗಾರರ ಮಾತುಗಳಲ್ಲಿ ಗಮನಿಸಬಹುದು. 'ಗೋವೆ ಕರ್ನಾಟಕದ ಅವಿಭಾಜ್ಯ ಅಂಗ. ಕರ್ನಾಟಕ ಇತಿಹಾಸದಲ್ಲಿ ಕ್ರಿ.ಶ. ೬ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಮಹತ್ವದ ಪಾತ್ರವಹಿಸಿದ್ದ ಅಂದಿನಿಂದಲೂ ಗೋವೆ ಕರ್ನಾಟಕದ ಅವಿಭಾಜ್ಯ ಅಂಗವಾಗಿ ಕನ್ನಡ ರಾಜ್ಯದ ವಶದಲ್ಲಿತ್ತು. ಗೋವೆ ಕ್ರಿ.ಶ. ೧೮೮೦ರವರೆಗೆ ಕನ್ನಡ ರಾಜ್ಯದ ಒಂದು ಪ್ರಾಂತ್ಯವಾಗಿತ್ತು.'[೧೧]

'ಈ ಗೋವೆಯ ನಾಡು ಶುದ್ಧ ಕರ್ನಾಟಕ. ಈ ಭಾಗದ ಚರಿತ್ರೆ, ಸಂಸ್ಕೃತಿ, ಭೌಗೋಳಿಕ ಸ್ಥಿತಿ ಹೇಗೆ ವಿಚಾರ ಮಾಡಿ ನೋಡಿದರೂ ಅದು ಕರ್ನಾಟಕ ಎಂಬುದು ನಿಜ. ಆದರೆ ಗೋವೆ ಸ್ವತಂತ್ರವಾದ ನಂತರ ಮಹಾರಾಷ್ಟ್ರಕ್ಕೆ ಸೇರಬೇಕೆಂಬ ವಾದವನ್ನು ಹೂಡುತ್ತಿದ್ದಾರೆ. ಈ ಎರಡು ಅಭಿಪ್ರಾಯಗಳನ್ನು ಗಮನಿಸಿದಾಗ ಒಂದು ಸ್ವತಂತ್ರ ರಾಜ್ಯವಾಗುವಷ್ಟು ಪ್ರದೇಶದ ಜನ ಸಂಸ್ಕೃತಿ ಕನಾಟಕದ ಕೈಬಿಟ್ಟು ಹೋಗಿರುವುದು ಶೋಚನೀಯವೇ ಸರಿ. ಕನ್ನಡ ನಾಡಿನ ಏಕೀಕರಣಕ್ಕೂ ನೆರೆ ಹೊರೆಯ ರಾಜ್ಯಗಳು ವಿರೋಧವನ್ನು ವ್ಯಕ್ತಪಡಿಸಿದ್ದುಂಟು. ತಮಿಳುನಾಡಿನ ಶ್ರೀ ರಾಜಗೋಪಾಲ ಚಾರ್ಯರು ಕಾಂಗ್ರೆಸ್‌ನ ಪರವಾಗಿ ಮದ್ರಾಸಿನ ಮುಖ್ಯಮಂತ್ರಿಗಳಾಗಿ ಕಾರ್ಯಭಾರ ನಡೆಸುವ ಅಧಿಕಾರ ಬಂದಾಗ ಕನ್ನಡ ನಾಡು ಒಂದಾಗುವುದರಲ್ಲಿ ಸುಖವಿಲ್ಲ ಎಂದು ನಮ್ಮ ದಕ್ಷಿಣ ಕನ್ನಡದ ಬಂಧುಗಳಿಗೆ ತತ್ವೋಪದೇಶ ಮಾಡಿದ್ದಾರೆ[೧೨] ಎಂಬ ವಿಷಯ ತಿಳಿದು ಬರುತ್ತದೆ.

ಕರ್ನಾಟಕ ಏಕೀಕರಣಗೊಳ್ಳುವುದಕ್ಕೆ ಈ ರೀತಿಯ ಅಡೆತಡೆಗಳು ನೆರೆಯ ರಾಜ್ಯದವರಿಂದ ಮೂಡಿಬರುತ್ತಿರುವ ಸಂದರ್ಭದಲ್ಲಿ ಇನ್ನು ಗಡಿಭಾಗದ ಪ್ರಜೆಗಳಲ್ಲಿ ಯಾವ ರೀತಿಯ ಆಲೋಚನೆ ಗಳನ್ನು ಬಿತ್ತುವ ಪ್ರಯತ್ನವನ್ನು ಮಾಡಿದ್ದಾರೆಂಬುದು ಊಹಿಸಬಹುದಾಗಿದೆ. ಆದರೆ ಇಂತಹ ಪ್ರಯತ್ನಗಳಿಗೆ

ತಮ್ಮ ಗಮನ ಹರಿಸದೇ ಎಲ್ಲರೂ ಒಗ್ಗಟ್ಟಾಗಿ ನಾಡಿನ ಏಕೀಕರಣಕ್ಕಾಗಿ ದುಡಿಯಬೇಕು, ಏಕೀಕರಣದ ನಂತರವೇ ನಮ್ಮ ಎಲ್ಲ ಸಮಸ್ಯೆಗಳಿಗೆ ಪರಿಹಾರ ದೊರಕಬಹುದೆಂಬ ಅಭಿಪ್ರಾಯವನ್ನು ಸರ್ವಸಾಮಾನ್ಯವಾಗಿ ಎಲ್ಲರೂ ವ್ಯಕ್ತಪಡಿಸಿದ್ದಾರೆ. ಆದರೆ ನಿಜಾಂಶವೆಂದರೆ ಏಕೀಕರಣವಾದ ನಂತರವೇ ಸಮಸ್ಯೆಗಳು ಜಟಿಲವಾಗತೊಡಗಿದವು. ಆದ್ದರಿಂದ 'ಹಿಂದುಸ್ಥಾನ ಸರ್ಕಾರದವರು ಖೈಬರ್ ಕಣಿವೆಯನ್ನು ಶತೃಗಳ ದಾಳಿಯಾಗದಂತೆ ಹೇಗೆ ಪ್ರಯತ್ನದಿಂದ ರಕ್ಷಿಸುತ್ತಾರೋ ಹಾಗೇ ನಾವು ನಮ್ಮ ಗಡಿಭಾಗಗಳನ್ನು ಸಂರಕ್ಷಿಸಬೇಕಾಗುತ್ತದೆ' ಎಂದು ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು ಅಭಿಪ್ರಾಯ ಪಡುತ್ತಾರೆ.

ಗಡಿನಾಡಿನ ರಕ್ಷಣೆ ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯ. ತಾನು ನಾಡಿನ ಯಾವುದೇ ಭಾಗದಲ್ಲಿದ್ದರೂ ಇಡಿಯಾಗಿ ಕನ್ನಡ ನಾಡಿನವನೆಂದು ಗುರುತಿಸಲ್ಪಡುತ್ತಾನೆ. ನಮ್ಮ ಶರೀರದ ಯಾವ ಭಾಗದಲ್ಲೇ ದುಃಖವಾಗಲಿ ಅದು ನನ್ನ ದುಃಖವು ಎಂಬಷ್ಟು ನಮ್ಮ ಸಂವೇದನಾ ಶಕ್ತಿ ತೀಕ್ಷ್ಣವಾಗಿರುತ್ತದೆ'[೧೩] ಹೀಗಿರುವುದು ನಿಜವೆ? ಇದೇ ರೀತಿಯಾಗಿ ನಾಡಿನ ವಿಷಯದಲ್ಲಿಯೂ ನಮ್ಮ ಸಂವೇದನೆ ತೀಕ್ಷ್ಣವಾಗಿರಬೇಕು ಎಂಬ ವಿಚಾರ ಪ್ರತಿಯೊಬ್ಬ ಕನ್ನಡಿಗನ ಪ್ರಜ್ಞೆಯಲ್ಲಿ ಮೊಳೆಯಬೇಕಾಗಿದೆ.

'ನಾವು ರನ್ನ, ಪಂಪರ ಉತ್ಸವಗಳನ್ನು ಮಾಡುತ್ತೇವೇನೋ ನಿಜ. ಆದರೆ ಅವರ ವಾಸಸ್ಥಳಗಳು ಕನ್ನಡಿಗರ ಕೈಬಿಟ್ಟು ಹೋಗುತ್ತವೆ ಎಂಬುದರ ಅರಿವು ನಮಗಿರುವುದಿಲ್ಲ.'[೧೪] ಅಂದರೆ ಅಂಧಾಭಿಮಾನದಿಂದ ನಮ್ಮಗಳಿಗೆ ನಾವೇ ಕುತ್ತು ತರುವ, ತಂದುಕೊಳ್ಳುವ ಸ್ಥಿತಿಯನ್ನು ನಾವೇ ನಿರ್ಮಾಣ ಮಾಡಿಕೊಳ್ಳುತ್ತಿದ್ದೇವೆ ಎಂಬ ವಿಚಾರ ಗಮನಿಸಬಹುದಾಗಿದೆ. ಗಡಿನಾಡಿನ ರಕ್ಷಣೆಗೋಸ್ಕರ ಹಲವಾರು ಹೋರಾಟಗಳು ನಡೆದಿವೆ/ನಡೆಯುತ್ತಿವೆ. ಈ ನಿಟ್ಟಿನಲ್ಲಿ ಗಡಿಭಾಗದ ಸಮಸ್ಯೆಗಳನ್ನು ಕುರಿತಾಗಿ ಅವುಗಳ ಪರಿಹಾರಕ್ಕಾಗಿ ಹಲವಾರು ಯೋಜನೆಗಳು, ವರದಿಗಳು ಸಿದ್ದಗೊಂಡವು. ಆದರೆ ಅವುಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಸರ್ಕಾರವು ವಿಫಲವಾಗುತ್ತಿದೆ. ಅವುಗಳಲ್ಲಿ ಪ್ರಮುಖವಾದುದು 'ಮಹಾಜನ ಆಯೋಗದ ವರದಿ'. ಆದ್ದರಿಂದ 'ಗಡಿನಾಡಿನ ರಕ್ಷಣೆಗೆ ಪರಿಷತ್ತಿನ ಮಹಾಜನ ಮಹತ್ತರ ಕರ್ತವ್ಯ ಮಹಾಜನ ಆಯೋಗದ ವರದಿ ಜಾರಿಗೆ ತರದಿರುವುದು. ಸರ್ಕಾರದ ದೌರ್ಬಲ್ಯಕ್ಕೆ ಸಾಕ್ಷಿಯಾಗಿದೆ. ಕನ್ನಡಿಗರ ಮುಖಕ್ಕೆಸೆ ಸವಾಲಾಗಿದೆ'[೧೫] ಎಂದು ದೇ.ಜ.ಗೌ. ತಮ್ಮ ಭಾಷಣದಲ್ಲಿ ಅಭಿಪ್ರಾಯ ಪಡುತ್ತಾರೆ.

ಆದರೆ ನಾವು ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಮಹಾಜನ ಆಯೋಗದ ವರದಿಯ ಪ್ರಕಾರ ಕಾಸರಗೂಡು ಕರ್ನಾಟಕಕ್ಕೆ ಸೇರುತ್ತದೆ. ಬೆಳಗಾವಿ ಕರ್ನಾಟಕದಲ್ಲಿಯೇ ಇರುತ್ತದೆಯಾದರೂ ನಿಪ್ಪಾಣಿ ಮಾತ್ರ ಮಹಾರಾಷ್ಟ್ರ ಸರ್ಕಾರಕ್ಕೆ ಹೋಗುತ್ತದೆ. ಇಷ್ಟೇ ಅಲ್ಲದೇ ಉಳಿದ ಕರ್ನಾಟಕದ ಗಡಿಗಳ ಪಾಡೇನು? ಎಂಬುದು ದೊಡ್ಡ ಪ್ರಶ್ನೆಯಾಗಿ ಉಳಿಯುತ್ತಿದೆ.

ಗಡಿನಾಡಿನ ಈ ಸಮಸ್ಯೆ ಹಾಗೆಯೇ ಮುಂದುವರೆದುಕೊಂಡು ಬರುತ್ತಿದೆ. ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಮತ್ತೊಂದು ಸಮಸ್ಯೆಗೆ ನಾಂದಿ ಹಾಡುತ್ತಿದೆ. ಆದರೆ ಗಡಿಭಾಗದ ಜನರ ಅಳಲನ್ನು ಯಾವ ಸರ್ಕಾರ ಪರಿಹರಿಸಬೇಕು? ಅವರ ಶಿಕ್ಷಣ, ವ್ಯವಹಾರ ಎಲ್ಲವೂ ಯಾವ ಭಾಷೆಯಲ್ಲಿ ನಡೆಯಬೇಕು? ಅವರಿಗೆ ಯಾವ ಭಾಗದವರು ಅವಕಾಶಗಳನ್ನು ಕಲ್ಪಿಸಿಕೊಡುತ್ತಾರೆ? ಇತ್ಯಾದಿಗಳೆಲ್ಲವೂ ಇಂದಿಗೂ ಜೀವಂತವಾದ ಸಮಸ್ಯೆಯಾಗಿದೆ.

ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರ, ತಮಿಳುನಾಡುಗಳಲ್ಲಿಯೂ ಕನ್ನಡ ಸಾಹಿತ್ಯ ಸಮ್ಮೇಳನಗಳು ನಡೆದಿವೆ. ನಾಡಿನ ಒಳಭಾಗದ ಮತ್ತು ಗಡಿಭಾಗದ ಕನ್ನಡಿಗರ ಸ್ಥಿತಿಗತಿಗಳೇ ಈ ತೆರನಾಗಿದ್ದರೆ ಇನ್ನು ಹೊರನಾಡಿನಲ್ಲಿ ವಲಸಿಗರಾಗಿ ಹೋದ ಕನ್ನಡಿಗರ ಪಾಡು ಯಾವ ರೀತಿ ಇರಬಹುದು. ಇದನ್ನು ನಮ್ಮ ಅಧ್ಯಕ್ಷರು ಯಾವ ರೀತಿ ಚರ್ಚಿಸಿದ್ದಾರೆಂದು ನೋಡಬಹುದಾಗಿದೆ. ಸಾಹಿತ್ಯ ಸಮ್ಮೇಳನಗಳನ್ನು ನಾಡಿನ ಹೊರಭಾಗಗಳಾದ ಮುಂಬೈ, ಮದ್ರಾಸ್, ಹೈದ್ರಾಬಾದ್‌ಗಳಲ್ಲಿ ನಡೆಸಿರುವುದು ತಿಳಿದುಬರುತ್ತದೆ. ಆದರೆ ಇಂತಹ ಭಾಗಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಡೆಸುವ ಉದ್ದೇಶವೇನು? ಆ ನಾಡುಗಳಲ್ಲಿರುವ ಕನ್ನಡಿಗರು ಒಂದಾಗಿ ಕನ್ನಡದ ಬಗ್ಗೆ ಜಾಗೃತರಾಗಲಿ ಮತ್ತು ಅವರ ಸ್ಥಿತಿಗತಿಗಳು ಯಾವ ತೆರನಾಗಿವೆ ಎಂಬುದನ್ನು ಚರ್ಚೆ ಮಾಡುವುದೇ ಆಗಿರುತ್ತದೆ. ಆದರೆ ಉತ್ತರದ ಮೊದಲಿನ ಅಂಶವೇನೋ ಭಾಗಶಃ ನೆರವೇರಬಹುದು. ಎರಡನೇಯ ಅಂಶ ಅವರ (ಹೊರ) ಸ್ಥಿತಿ–ಗತಿಯ ಬಗ್ಗೆ ಯಾರು ಚರ್ಚಿಸಬೇಕು? ಈ ರೀತಿಯ ಚರ್ಚೆಗೆ ಇಂಥ ಸಮ್ಮೇಳನಗಳು ವೇದಿಕೆಯಾಗಬೇಕು. ಅದನ್ನು ಬಿಟ್ಟು ಈ ಮೂರು ಭಾಗಗಳಲ್ಲಿ ಮುಂಬೈ – ೧೯೩೫ರಲ್ಲಿ ಎನ್.ಎಸ್. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಮುಂಬೈ ೧೯೫೧ರಲ್ಲಿ ಎಂ. ಗೋವಿಂದಪೈ ಅವರ ಅಧ್ಯಕ್ಷತೆಯಲ್ಲಿ, ಹೈದ್ರಾಬಾದ್ ೧೯೪೧ರಲ್ಲಿ ಎ. ಆರ್. ಕೃಷ್ಣಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಮದರಾಸು ೧೯೪೫ರಲ್ಲಿ ಟಿ.ಪಿ. ಕೈಲಾಸಂ ಅವರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳು ನಡೆದವು.

ಆದರೆ ಈ ಸಮ್ಮೇಳನಾಧ್ಯಕ್ಷರು ಹೊರನಾಡುಗಳಲ್ಲಿ ಬದುಕುತ್ತಿರುವ ಕನ್ನಡಿಗರ ಸ್ಥಿತಿಗತಿಯ ಬಗ್ಗೆ ಯಾವುದೇ ಗಂಭೀರ ಚರ್ಚೆಯನ್ನು ಮಾಡಿಲ್ಲವೆಂದು ಹೇಳಬಹುದು. ಯಾಕೆಂದರೆ ಈ ಸಾಹಿತ್ಯ ಸಮ್ಮೇಳನಗಳು ಹೊರನಾಡುಗಳಲ್ಲಿ ನಡೆಯುವುದಕ್ಕೆ ಅವಕಾಶ ಕೊಟ್ಟಿರುವುದೇ ಹೆಚ್ಚಿನ ಮಾತು ಎಂಬಂತೆ ವರ್ತಿಸಿರುವುದನ್ನು ಅವರ ಭಾಷಣಗಳಲ್ಲಿಯೇ ಕಾಣಬಹುದು. ಕರ್ನಾಟಕವು ಈ ಹಿಂದೆ ವಿಶಾಲ ಪ್ರಾಂತವಾಗಿದ್ದೇನೋ ನಿಜ. ವಿಶಾಲ ಪ್ರಾಂತ್ಯವಾದ ಕರ್ನಾಟಕದ ತುಂಬೆಲ್ಲಾ ಕನ್ನಡಿಗರು ಜೀವಿಸಿದರು/ ಜೀವಿಸುತ್ತಿರುವುದು ಕೂಡ ಅಷ್ಟೇ ಸತ್ಯ. ಯಾವಾಗ ರಾಜ್ಯ ಪುನರ್‌ವಿಂಗಡಣೆ ಯಾಯಿತೋ, ಕರ್ನಾಟಕದ ಭೌಗೋಳಿಕ ಎಲ್ಲೆ ಗುರುತಿಸಲ್ಪಟ್ಟಿತ್ತೋ, ಕರ್ನಾಟಕದ ಗಡಿಗಳು ಕತ್ತರಿಸಲ್ಪಟ್ಟವೋ ಆಗ ಲಕ್ಷಗಟ್ಟಲೆ ಕನ್ನಡಿಗರು ನವಕರ್ನಾಟಕದ ರೂಪುರೇಷೆಯ ಹೊರಗಡೆಯೇ ಉಳಿದುಬಿಟ್ಟರು. ಆದರೆ ಅವರೂ ಸಹ ಕನ್ನಡಿಗರು ತಾನೆ? ಅವರ ಮೊರೆಗಳನ್ನು ಕರ್ನಾಟಕ ದವರಲ್ಲದೇ ಮತ್ಯಾರು ಆಲಿಸಬೇಕು? ದೊಡ್ಡ ದೊಡ್ಡ ಶಹರಗಳಾದ ಮುಂಬೈ, ಹೈದ್ರಾಬಾದ್ ಮದರಾಸುಗಳಲ್ಲಿ ಸಮ್ಮೇಳನಗಳು ಜರುಗಿದರೂ ಅಲ್ಲಿನ ಕನ್ನಡಿಗರ ಬಗ್ಗೆ ಯಾವುದೇ ಚರ್ಚೆ ಯಾಗದಿರುವುದು ವಿಷಾದನೀಯ.

ಕರ್ನಾಟಕದಲ್ಲಿ ಯಾವ ರೀತಿ ಬೇರೆ ಭಾಷೆಗಳಿಗೆ ಅವಕಾಶಗಳನ್ನು ಕೊಟ್ಟು ಶಿಕ್ಷಣದಲ್ಲಿ ಅವುಗಳಿಗೂ ಸ್ಥಾನ ಕಲ್ಪಿಸಿಕೊಟ್ಟಿದೆಯೋ ಅದೇ ರೀತಿ ಕರ್ನಾಟಕದ ಹೊರಗಿರುವ ಕನ್ನಡಿಗರಿಗೂ ಬೇರೆ ರಾಜ್ಯಗಳು ಕನ್ನಡವನ್ನೇ ಮಾತೃಭಾಷೆಯಾಗಿ ಅಭ್ಯಾಸ ಮಾಡಲು ಅವಕಾಶ ಕೊಡಬೇಕೆಂದು, ಹೊರಗುಳಿದ ಕನ್ನಡಿಗರ ಬಗ್ಗೆ ಈ ಒಂದು ಅಂಶವನ್ನು ೧೯೩೫ರಲ್ಲಿ ಮುಂಬೈಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ ಎನ್.ಎಸ್. ಸುಬ್ಬರಾಯರ ಭಾಷಣದಲ್ಲಿ ಗಮನಿಸಬಹುದಾಗಿದೆ.[೧೬]

ಪುನಃ ೧೯೫೧ರಲ್ಲಿ ಎಂ. ಗೋವಿಂದಪೈಗಳವರ ಅಧ್ಯಕ್ಷತೆಯಲ್ಲಿ ಮತ್ತೊಮ್ಮೆ ಸಾಹಿತ್ಯ ಸಮ್ಮೇಳನ ಸಮಾವೇಶಗೊಂಡಿತ್ತು. ಈ ಸಂದರ್ಭದಲ್ಲಿ ಹೊರನಾಡುಗಳಲ್ಲಿ ಸಾಹಿತ್ಯ ಸಮ್ಮೇಳನಗಳು ನಡೆಯುವುದು ಉಚಿತ. ಅವು ನೆರೆ ರಾಜ್ಯಗಳಲ್ಲಿ ಸೇರಿ ಹೋದ ಕರ್ನಾಟಕದ ಪ್ರಾಂತಗಳೇ ಮುಂಬೈ ಕೂಡಾ ಕರ್ನಾಟಕದ ಪ್ರಾಂತವೇ ಎಂದು ಕೆಲವು ಆಧಾರಗಳ ಮೂಲಕ ಖಚಿತಪಡಿಸುತ್ತಾರೆ.[೧೭]

ಹೊರನಾಡ ಕನ್ನಡಿಗರೂ ಸಹ ಗಡಿನಾಡಿನ ಕನ್ನಡಿಗರಂತೆ ಕನ್ನಡದ ಅವಕಾಶಗಳ ಸೌಲಭ್ಯಗಳ ವಂಚಿತರಾಗಿಯೇ ಉಳಿದುಬಿಟ್ಟಿದ್ದಾರೆ. 'ಈಗಂತೂ ಕನ್ನಡ ಮಲಪ್ರಭಾ ಪಂಚಗಂಗಾಗಳನ್ನು ದಾಟಿ ಬರುವ ಹಾಗಿಲ್ಲ. ಅಂತೆಯೇ ಮುಂಬೈಯಲ್ಲಿರುವ ಕನ್ನಡ ಜನಕ್ಕೆ ಇಮ್ಮಡಿ ಹೊಣೆಯಿದೆ. ಅವರಿಗೆ ಅದರ ಅರಿವಿರಲಿ ಬಿಡಲಿ, ಅವರು ಇಡಿಯ ಕನ್ನಡ ನಾಡಿನ ಪ್ರತಿನಿಧಿಗಳು ಕನ್ನಡದ ಭರ್ಜಿಯ ಮೊನೆ ಕನ್ನಡದ ಕೀರ್ತಿ ಗೌರವ ಹಿಂದುಸ್ಥಾನದಲ್ಲಿ ಹರಡಲಿಕ್ಕೆ ಅವರೇ ಸಹಜವಾದ ದಾರಿ ಎಂದು ಬೆಟಗೇರಿ ಕೃಷ್ಣಶರ್ಮ ಅವರು ಮುಂಬೈ ಕನ್ನಡಿಗರ ಬಗ್ಗೆ ಹೇಳಿರುವುದನ್ನು ನೆನಪಿಸಿಕೊಳ್ಳಬಹುದಾಗಿದೆ.[೧೮]

ಬೆ.ಕೃ. ಶರ್ಮರವರ ಈ ಮಾತನ್ನು ಕೇವಲ ಮುಂಬೈನಲ್ಲಿರುವ ಕನ್ನಡಿಗರಿಗೆ ಮಾತ್ರವಲ್ಲ, ಇತರೆ ಭಾಗಗಳಲ್ಲಿರುವ ಕನ್ನಡಿಗರಿಗೂ ಅನ್ವಯಿಸಬಹುದಾಗಿದೆ. ಹೊರನಾಡುಗಳಲ್ಲಿ ಕನ್ನಡಿಗರ ಕೀರ್ತಿ ಗೌರವಗಳನ್ನು ಹರಡುವ ರೂವಾರಿಗಳ ಬದುಕಿನ ಸ್ಥಿತಿಗತಿಗಳ ಬಗ್ಗೆ ಗಮನಕೊಡಬೇಕಾದುದು ಯಾರ ಕರ್ತವ್ಯ? ಈ ಬಗ್ಗೆ ಸಾಹಿತ್ಯ ಸಮ್ಮೇಳನ ಅಧ್ಯಕ್ಷೀಯ ಭಾಷಣಗಳಲ್ಲಿ ಚರ್ಚೆಗಳು ನಡೆಯಬೇಕಾಗಿತ್ತು. (೩ ಸಂಪುಟಗಳಲ್ಲಿ ಮಾತ್ರ) ಬೇರೆ ವಿಷಯಗಳಿಗೆ ಮಹತ್ವ ಕೊಟ್ಟಷ್ಟು ಯಾಕೆ ಈ ವಿಷಯಗಳಿಗೆ ಮಹತ್ವ ಕೊಟ್ಟಿಲ್ಲ? ಎಂಬುದೇ ಪ್ರಶ್ನೆಯಾಗಿಯೇ ಉಳಿದಿದೆ.

ಅಡಿಟಿಪ್ಪಣಿಗಳು

೧. ಪು.ಸಂ. ೧೩೨, ಕನ್ನಡ ಪ್ರಜ್ಞೆ

೨. ಪು.ಸಂ. ೧೯೪, ಕನ್ನಡ ಪ್ರಜ್ಞೆ

೩. ಪು.ಸಂ. ೨, ಕನ್ನಡಿಗರ ಗೋವೆ ವಲಸೆ

೪. ಪು.ಸಂ. ೪೮, ಕನ್ನಡ ಕನ್ನಡಿಗ ಕರ್ನಾಟಕ

೫. ಪು.ಸಂ. ೨೬೭, ಸಂ.೩

೬. ಪು.ಸಂ. ೨, ಕನ್ನಡಿಗರ ಗೋವೆ ವಲಸೆ

೭. ಪು.ಸಂ. ೨೨೧, ಸಂ.೧

೮. ಪು.ಸಂ. ೧೬೩, ಸಂ.೨

೯. ಪು.ಸಂ. ೨೯೭, ಸಂ.೩

೧೦. ಪು.ಸಂ. ೧೯೪, ಕನ್ನಡ ಪ್ರಜ್ಞೆ

೧೧. ಪು.ಸಂ. ೨೯೭, ಸಂ.೩

೧೨. ಪು.ಸಂ. ೧೩೭, ಸಂ.೨

೧೩. ಪು.ಸಂ. ೩೧೭, ಸಂ.೧

೧೪. ಪು.ಸಂ. ೩೧೭, ಸಂ.೧

೧೫. ಪು.ಸಂ. ೪೩೭, ಸಂ.೩

೧೬. ಪು.ಸಂ. ೨೮, ಸಂ.೨

೧೭. ಪು.ಸಂ. ೪೯೩, ಸಂ.೩

೧೮. ಪು.ಸಂ. ೯೬, ನಾಡು ನುಡಿ, ಸಂ.೨

ಅಧ್ಯಾಯ : ಏಳು

## ಕನ್ನಡದ, ಕರ್ನಾಟಕದ ಕೊರತೆಗಳು

ಇಲ್ಲಿ ಕನ್ನಡದ ಕೊರತೆಗಳೆಂದರೆ ಅದು ಪರಿಷತ್ತಿನ ಕೊರತೆಯಾಗಿರಬಹುದು, ಭಾಷೆ, ಸಾಹಿತ್ಯ, ಗ್ರಂಥಗಳು ಹೊರನಾಡು/ಗಡಿನಾಡ ಕನ್ನಡಿಗರು ನೆರೆಹೊರೆ ಭಾಷೆ ಪ್ರಾಂತ್ಯ ಶಿಕ್ಷಣ ಇತ್ಯಾದಿಗಳಿದ್ದಲ್ಲಿ ಇನ್ನು ಆಗಬೇಕಾದ ವಿಷಯಗಳನ್ನು ಕುರಿತು ಪ್ರಸ್ತಾಪ ಮಾಡಲಾಗಿದೆ.

* ಮೊದಲಿಗೆ ಸಮ್ಮೇಳನದ ರೀತಿಯಲ್ಲಿಯು ಒಂದೆರಡು ಮಾರ್ಪಾಟಾಗಬೇಕು. ಆದರೆ ಅದರ ಅಂಗಗಳಾಗಿ ಗೋಷ್ಠಿಗಳು ಹೇಗೆ ನಡೆಯಬೇಕು. ಅಭ್ಯಾಸ ಮಂಡಲ ಏರ್ಪಾಡಾದರೆ ಅದು ಹೇಗಾಗಬೇಕು. ಈ ಎಲ್ಲಾ ವಿಷಯಗಳನ್ನು ಪರ್ಯಾಲೋಚಿಸಿ ಪರಿಷತ್ ಒಂದು ಕ್ರಮಬದ್ಧ ವ್ಯವಸ್ಥೆಯನ್ನು ರೂಪಿಸುವುದು ಅವಶ್ಯವೆಂದು ತೋರುವುದು.

* ಪರಿಷತ್‌ನಿಂದ ಒಬ್ಬಿಬ್ಬರು ಪ್ರತಿನಿಧಿಗಳನ್ನು ಸೋದರ ಭಾಷಾ ಸಮ್ಮೇಳನಗಳಿಗೆ ಕಳಿಸಬೇಕು. ಒಂದೆರಡು ಸೋದರ ಪ್ರಾಂತ್ಯಗಳ ಪ್ರತಿನಿಧಿಗಳನ್ನು ಪ್ರತಿ ವರ್ಷ ನಮ್ಮ ಸಮ್ಮೇಳನಕ್ಕೆ ಬರ ಮಾಡಿಕೊಳ್ಳಬೇಕು ಇದರಿಂದ ಸಮ್ಮೇಳನಗಳಿಗೆ ಒಂದು ಅಂತರ್ ಪ್ರಾಂತೀಯ. ಸ್ವರೂಪ ಬರುವುದು ಉಳಿದ ಭಾಷೆಗಳ ವಿಕಾಸದೊಡನೆಯು ನಮ್ಮ ನಿಕಟ ಸಂಬಂಧ ಬೆಳೆಯುವುದು.

* ಐದು ವರ್ಷಗಳಿಗೊಮ್ಮೆಯಾದರೂ ನಮ್ಮ ನೆರೆಹೊರೆಯ ಭಾಷೆಗಳಿಗೆ ಒಂದು ಅಂತರ ಪ್ರಾಂತೀಯ ಸಾಹಿತ್ಯ ಸಮ್ಮೇಳನವನ್ನು ಕರೆಯಬೇಕು. ಅಖಿಲ ಭಾರತೀಯ ಸಾಹಿತ್ಯ ಸಮ್ಮೇಳನ ೧೩–೧೪ಳ ವರ್ಷಗಳಿಗೊಮ್ಮೆಯಾದರೂ ಕನ್ನಡ ನಾಡಿನಲ್ಲಿ ನೆರೆಯಬೇಕು. ಇದು ಭಾರತೀಯ ಪೆನ್ ಸಮ್ಮೇಳನವಾದರೂ ಸರಿಯೇ.

* ಪ್ರತಿ ವರ್ಷ ಸಾಹಿತಿಗಳ ಸೆಮಿನಾರ್ ಇಲ್ಲವೇ ಸಂಕೂಟ ಒಂದು ಅಗತ್ಯವೆನಿಸಿದೆ. ಈ ರೀತಿಯ ಸಂಕೂಟಗಳನ್ನು ರಚಿಸಲು ಸ್ವಾಗತ ಸಮಿತಿಯವರು ನೇಮಕಗೊಳ್ಳಬೇಕು.

* ಪ್ರಾತಿನಿಧಿಕ ಪುಸ್ತಕ ಭಂಡಾರಗಳು ನಾಡಿನಾದ್ಯಂತ ಸ್ಥಾಪನೆಯಾಗಬೇಕು.

* ಒಳ್ಳೆಯದಾದರೆ ಅಜ್ಞಾತ ಕೃತಿಗಳ ಪ್ರಕಾಶನ ಜನಸಾಮಾನ್ಯರಲ್ಲಿ ಈ ಕೃತಿಗಳ ಬಗ್ಗೆ ಅರಿವು ಮೂಡಿಸುವುದು ಅವಶ್ಯವಾಗಿದೆ. ಯೋಗ್ಯ ಪ್ರಥಮ ಕೃತಿಗಳ ಪ್ರಕಾಶನ ಸಂಸ್ಕೃತಿಯೊಂದು ರೂಪಿತವಾಗಬೇಕಾಗಿದೆ.

* ಭಾರತದ ಪ್ರಮುಖ ನಗರಗಳಲ್ಲಿ ಭಾರತದ ಪ್ರಮುಖ ಭಾಷೆಗಳಲ್ಲಿ ತಮ್ಮ ಸಭಾ ಮಂದಿರಗಳನ್ನು ಕಟ್ಟಿಸಿಕೊಂಡಿವೆ. ಅಥಿತಿ ಭವನಗಳನ್ನು ನಿಲ್ಲಿಸಿವೆ. ಪ್ರಾಥಮಿಕ ಶಾಲೆಗಳನ್ನು ನಡೆಸುತ್ತಿವೆ. ಪುಸ್ತಕಾಲಯಗಳನ್ನು ರಚಿಸಿಕೊಂಡಿವೆ. ಹೀಗಾಗಿ ಅನ್ಯ ಭಾಷೆಯ ಸಹೋದರರು ಹೋದ ಕಡೆಗಳಲೆಲ್ಲಾ ತಮ್ಮ ಭಾಷಾ ಸಂಸ್ಕೃತಿಗಳ ಜೀವಂತ ಸಂಪರ್ಕವನ್ನಿಟ್ಟುಕೊಳ್ಳುವುದು ಸಾಧ್ಯವಾಗಿದೆ. ಆದರೆ ಹೊರ ನಾಡ ಕನ್ನಡಿಗರ ಬಗ್ಗೆ ನಾವು ಗಮನ ಹರಿಸಬೇಕಾಗಿದೆ. ಹೊರನಾಡುಗಳಲ್ಲಿ ಕನ್ನಡಿಗರ ಪರಿಸ್ಥಿತಿಯ ಬಗ್ಗೆ ವಿಚಾರಿಸಬೇಕಾಗಿದೆ.

* ಅನ್ಯಪ್ರಾಂತ್ಯಗಳಲ್ಲಿ ಸೇರ್ಪಡೆಯಾದ ಕನ್ನಡ ಭಾಗಗಳಲ್ಲಿ ಆಗಬೇಕಾದ ಸಾಂಸ್ಕೃತಿಕ ಕಾರ್ಯವನ್ನು

ಅಂತರ್‌ರಾಷ್ಟ್ರೀಯ ಸಮ್ಮೇಳನಗಳನ್ನು ಕನ್ನಡಕ್ಕೆ ದೊರೆಯಬೇಕಾದ ಸ್ಥಾನಮಾನಗಳನ್ನು ಇಲ್ಲಿ ನೆನೆಯಬಹುದು.

* ಶೈಕ್ಷಣಿಕ ಸ್ವರೂಪದಲ್ಲಿ ಕನ್ನಡ ಉಚ್ಚ ಶಿಕ್ಷಣ ಮಾಧ್ಯಮವಾಗಬೇಕು. ಪ್ರಚಲಿತ ವಿದ್ಯಮಾನಗಳನ್ನು ವಿದ್ಯಾರ್ಥಿಯು ಸರಿಯಾಗಿ ಬಳಸಿಕೊಳ್ಳುವಂತೆ ಮಾಡಬೇಕು. ಕನ್ನಡ ಮಾಧ್ಯಮವಾದ ಮೇಲೂ ಸ್ನಾತಕೋತ್ತರ ಶಾಖೆಗಳಲ್ಲಿ ಹಿಂದಿಯಾಗಲಿ ಇಂಗ್ಲೀಷ್ ಆಗಲಿ ಮಾಧ್ಯಮವಾಗಿರಬೇಕು. ಭಾರತದ ಐಕ್ಯಸಾಧನೆಗಳಲ್ಲಿ ಇದೊಂದು ಮಹತ್ವದ ಸಾಧನವಾಗಿದೆ.

* ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಭಾಷಾ-ಸಾಹಿತ್ಯಗಳ ಅಭ್ಯಾಸದಲ್ಲಿ ಮಾತ್ರ ಹೆಚ್ಚಿನ ಮಾರ್ಪಾಟು ಅವಶ್ಯವೆಂದು ಕಾಣುತ್ತದೆ. ಸಂಸ್ಕೃತದ ಅಲಂಕಾರಶಾಸ್ತ್ರದೊಂದಿಗೆ ಆಂಗ್ಲ ವಿಮರ್ಶೆಯ ಉತ್ಕಟ ಅಭ್ಯಾಸವು ಇಲ್ಲಿ ಅತ್ಯಗತ್ಯ. ಅದಿಲ್ಲದೆ ವಿಮರ್ಶೆಯ ಸಮತೂಕ ಸಾಧಿಸುವುದಿಲ್ಲ. ಭಾಷಾಶಾಸ್ತ್ರ, ಇತಿಹಾಸ, ಪ್ರಾಚೀನ ಭಾರತೀಯ ಸಂಸ್ಕೃತಿ ಹೀಗೆ ಬೇರೊಂದು ವಿಷಯದ ಜೊತೆಗೆ ಕನ್ನಡ ವ್ಯಾಸಂಗ ಸಾಗಿರುವುದು ಅವಶ್ಯ.[೧]

**ಸಾಹಿತ್ಯ ಸಂಬಂಧದ ಸಮಸ್ಯೆಗಳು**

ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಸಮಸ್ಯೆಗಳು ಕಾಡುತ್ತಿವೆ. ಅವುಗಳ ಬಗ್ಗೆ ನಮ್ಮ ಅಧ್ಯಕ್ಷರುಗಳು ಏನು ಹೇಳಿದ್ದಾರೆ ಎನ್ನುವುದನ್ನು ಈ ಮುಂದಿನಂತೆ ಗಮನಿಸಬಹುದಾಗಿದೆ. 'ನಾವು ಸರ್ವ ಸಮೃದ್ಧ ನಾಡಿನಲ್ಲಿ ಹುಟ್ಟಿ ಪ್ರಪಂಚದಲ್ಲಿಯೇ ಶ್ರೇಷ್ಠವಾದ ಭಾರತೀಯ ಸಂಸ್ಕೃತಿಯ ಆಶ್ರಯದಲ್ಲಿದ್ದು ಕೂಡಾ ನಾನು ಮೇಲೂ, ತಾನು ಮೇಲು; ಅವನು ಕೀಳು ಇವನು ಕೀಳು ಎಂಬ ಭಾವನೆಯನ್ನು ವೃದ್ಧಿಪಪಡಿಸಿಕೊಂಡೆವು. ಸರ್ವ ದೇಹಗಳಲ್ಲಿಯೂ ದೇವನಿದ್ದಾನೆ. ಎಂಬುದನ್ನು ಸರಿಯಾಗಿ ಅರ್ಥೈಯಿಸಿಕೊಂಡಿಲ್ಲ. ಶ್ವೇತಾಶ್ವತರೋಪನಿಷತ್ತಿನ 'ಹೆಂಗಸು ನೀನೆ; ಗಂಡಸು ನೀನೆ; ಯುವಕ ನೀನೆ; ಯುವತಿ ನೀನೆ; ವೃದ್ಧಾಪ್ಯಯಿಂದ ದೊಣ್ಣೆಯನ್ನು ಹಿಡಿದಿರುವ ಮಾಟಗಾರ ನೀನೆ; ಜನ್ಮಧಾರಣೆ ಮಾಡಿ ನೀನು ಸರ್ವತೋಮುಖನಾಗಿರುವ' ಎನ್ನವ ವಾಣಿಗಳನ್ನು ಅರಗಿಸಿಕೊಳ್ಳಲಾರದೆ ಹೋದೆವು 'ಅಡುಗೆ ಮಾಡುವ ಕೆಲಸ ಕೀಳು, ಸಂಪಾದನೆ ಮಾಡುವ ಕೆಲಸ ಮೇಲು' ಎಂಬ ಮೂರ್ಖತೆಯ ಭಾವನೆಯಿಂದ ಮಹಿಳೆಯರನ್ನು ಕಡೆಗಂಡು ಜನಾಂಗದ ಅರ್ಧ ಭಾಗಕ್ಕೆ ಅನ್ಯಾಯ ಮಾಡಿದೆವು. ಮಹಿಳೆಯರು ಕೀಳೆಂದು ಭಾವಿಸಿ ಮಹಿಳಾ ಕುಲಕ್ಕೆ ಅವಮಾನ ಮಾಡಿದೆವು. ಭಾರತ ಮಾತೆ ರತ್ನ ಕಂಕಣದಂತಿದ್ದ 'ಜಾತಿ ಪದ್ಧತಿ'ಯು ಕಬ್ಬಿಣದ ಬಳೆಯಾಗುವಂತೆ ಮಾಡಿದೆವು. ವಿಶ್ವಕವಿ ರವೀಂದ್ರರು ಹೇಳಿರುವಂತೆ ಜಾತಿ ಪದ್ಧತಿಯು ದೂರದೃಷ್ಟಿಯುಳ್ಳ ಮೇಧಾವಿಗಳಾದ ನಮ್ಮ ಹಿರಿಯರಿಂದ ಕಲ್ಪಿತವಾದ ಅಮೃತ ಫಲ;[೨] ಇದನ್ನು ಒಪ್ಪಬಹುದೇ? ಇದು ಅಮೃತ ಫಲವೋ? ಹಾಲಾಹಲವೋ? 'ಜಾತಿ' ದೂರದೃಷ್ಟಿಯುಳ್ಳ ಮೇಧಾವಿಗಳ ರಚನೆ ಅಲ್ಲ. ಅದು ದುರಾಲೋಚನೆಯುಳ್ಳವರ ರಚನೆ ಎಂದರೆ ತಪ್ಪಿಲ್ಲದಿಲ್ಲ. ಮುಂದುವರೆದು ಇನ್ನು ಕೆಲವು ವಿಷಯಗಳನ್ನು ಗಮನಿಸಬಹುದು. ಈ 'ಅಮೃತ ಫಲ ಯಾರಿಗೆ ಅಮೃತ ಫಲವಾಗಿತ್ತು? ಯಾರಿಗೆ ಬೇಕಿತ್ತೋ ಅದರ ಹಿತಾಸಕ್ತಿಗನುಗುಣವಾಗಿ ರಚಿಸಿಕೊಂಡು ಒಂದು ಬಿಗಿಯಾದ ಬಂಧವಾಗಿತ್ತು 'ಜಾತಿ'. ಆದರೆ ಈ ಅಮೃತ ಫಲವನ್ನು ನಮ್ಮ ಅಜ್ಞಾನದಿಂದ ವಿಷವಾಗಿಸಿದ್ದೇವೆ. ಜಾತಿಗಳು ಆತ್ಮಕಲ್ಯಾಣಕ್ಕಾಗಿ ರೂಪಗೊಂಡಿರುವಂತವು. ಆದರೆ ಅವುಗಳನ್ನು ಆತ್ಮಘಾತಕ, ಸಮಾಜಘಾತಕ ಶಕ್ತಿಗಳಾಗಿ ಪರಿಣಮಿಸಿವೆ.

ಇವೆಲ್ಲಾ ಹಿಂದಿನ ಕೆಲವು ತಲೆಮಾರುಗಳು ಮಾಡಿದ ಹಗರಣಗಳೆಂದು ತೃಪ್ತಿಪಟ್ಟುಕೊಳ್ಳುವಂತಿಲ್ಲ. ಈ ಹಗರಣವೇ ಒಂದಲ್ಲ ಒಂದು ರೂಪದಲ್ಲಿ ಸಮಾಜದಲ್ಲಿ ಜೀವಂತವಾಗಿದೆ. 'ಈ ರಾಷ್ಟ್ರ ಮೇಲು, ಆ ರಾಷ್ಟ್ರ ಕೀಳು, 'ಜಾತಿ ಮೇಲು ಆ ಜಾತಿ ಕೀಳು' ಗಂಡಸು ಮೇಲು, ಹೆಂಗಸು ಕೀಳು' ಹೀಗೆ ಈ ಮೇಲು ಕೀಳು ಬಗೆ ಬಗೆಯ ರೂಪದಲ್ಲಿ ಕಾಣುತ್ತದೆ. ಆದ್ದರಿಂದ ನಮ್ಮ ಹೃದಯಗಳು ಪರಿವರ್ತನೆ ಆಗದೇ ಯಾವ ಕ್ಷೇತ್ರದಲ್ಲಿಯೂ ಪ್ರಗತಿಯನ್ನು ಸಾಧಿಸಲು ಸಾಧ್ಯವಿಲ್ಲ. 'ಸಾಹಿತ್ಯ ಸಂಗೀತ ಕಲಾಕ್ಷೇತ್ರಗಳಲ್ಲಿ ಅರ್ಥಾತ್ ಸರಸ್ವತಿಯ ದೇವಾಲಯದಲ್ಲಿ ಅಸ್ಪೃಶ್ಯರಿಗೆ ಅವಕಾಶವಿಲ್ಲ' (ಇಲ್ಲಿ ಡಾ. ಅಂಬೇಡ್ಕರ್ ಅವರ ಶೈಕ್ಷಣಿಕ ಜೀವನದ ಘಟನೆಗಳು ಅಪವಾದವಾಗಿವೆ.) ಇಂಥ ಕೋಮು ದ್ವೇಷಗಳು ಸಾಹಿತ್ಯದಲ್ಲಿ ತಲೆ ಹಾಕದಂತೆ ನೋಡಿಕೊಳ್ಳ ಬೇಕಾಗಿದೆ.[೪] ಆದ್ದರಿಂದ ಎಲ್ಲರ ಹೃದಯಗಳು ಪರಿವರ್ತನೆಯಾಗಿ ಹೃದಯಗಳು ಒಂದಾಗಬೇಕು ಎನ್ನುವ ಅಪೇಕ್ಷೆಗಳು ಕಂಡುಬರುತ್ತಿವೆ.

**ಕರ್ನಾಟಕದ ಸಮಸ್ಯೆಗಳು**

ನಾಡಿನ ಸರ್ವತೋಮುಖ ಬೆಳವಣಿಗೆಗೆ /ಪ್ರಗತಿಗೆ ಕೆಲವು ಸಮಸ್ಯೆಗಳು ಅಡ್ಡಿಯಾಗಿವೆ. ಆ ಸಮಸ್ಯೆಗಳನ್ನು ಮುಂದಿನಂತೆ ನೋಡಬಹುದಾಗಿದೆ.

*** ಕನ್ನಡ ಟೈಪರೈಟರ್‌ಗಳು**

ಆಧುನಿಕ ಪ್ರಗತಿಗೆ ಸಂಬಂಧಿಸಿದಂತೆ ಯಂತ್ರಗಳ ಸೌಲಭ್ಯಗಳಿಲ್ಲದೆ ಯಾವ ಪ್ರಗತಿಯನ್ನು ಸಾಧಿಸಲು ಸಾಧ್ಯವಿಲ್ಲ. ಕನ್ನಡಕ್ಕೆ ಅತ್ಯವಶ್ಯಕವಾಗಿ ಟೈಪರೈಟರ್ ಮೋನೋಟೈಪ್, ಲೀನೋಟೈಪ್, ಲಿಸೋಟೈಪ್ ಯಂತ್ರಗಳು ಅವಶ್ಯವಾಗಿವೆ. ಪ್ರಸ್ತುತಕ್ಕೆ ಹೋಲಿಸಿದಾಗ ಗಣಕ ಯಂತ್ರಗಳು ಈ ಸ್ಥಾನವನ್ನು ಕಬಳಿಸಿವೆ.

*** ಪುರಾತತ್ವ ಶಾಖೆ**

ಕೇಂದ್ರ ಸರ್ಕಾರದ ಪಾಲಾದ ಮೇಲೆ ಪುರಾತತ್ವ ಇಲಾಖೆಯ ಪ್ರಾಂತ ಸರ್ಕಾರದ ಅವಗಣನೆಗೆ ಕಾರಣವಾಗಿದೆ. ದಿಲ್ಲಿಯಲ್ಲಿರುವ ಕೇಂದ್ರ ಸರ್ಕಾರಕ್ಕೆ ನಮ್ಮ ನಾಡಿನ ಹಾಳು ದೇವಾಲಯಗಳು ಶಿಲಾ ಲಿಪಿಗಳು ಹೊಸ ನಿವೇಶನ ಶೋಧ ಇವುಗಳ ಬಗ್ಗೆ ಸಾಕಷ್ಟು ಉತ್ಸಾಹವಿಲ್ಲ. ಅನೇಕ ದೇವಾಲಯಗಳು ಹಾಳಾಗುತ್ತಿವೆ. ಭವ್ಯವಾದ ಶಿಲ್ಪಕಲಾ ಮೂರ್ತಿಗಳಿಗೆ ರಕ್ಷಣೆ ಇಲ್ಲ. ಅವು ವಿದೇಶಿ ಪ್ರವಾಸಿಗರ ಪಾಲಾಗುತ್ತಿವೆ.

*** ಲಿಪಿಯ ಪ್ರಶ್ನೆ**

ಕನ್ನಡ ತೆಲುಗು ಭಾಷೆಗಳ ಲಿಪಿಗಳಲ್ಲಿ ಏಕರೂಪತೆ ಇರುವುದರಿಂದ ಇವೆರಡು ಲಿಪಿಯನ್ನು ಒಂದುಗೂಡಿಸುವುದು ವಿಹಿತವೆಂಬ ಸಲಹೆಯನ್ನು ಮೈಸೂರು ಮಹಾರಾಜಾ ಕಾಲೇಜಿನ ತೆಲುಗು ಅಧ್ಯಾಪಕರಾದ ಶ್ರೀ ಕೆ. ಸುಬ್ಬರಾಮಪ್ಪನವರು 'ಸಂಯುಕ್ತ ಲಿಪಿ'ಯಲ್ಲಿ ಶೇಕಡಾ ೯೫ ಭಾಗ ತೆಲುಗು; ಶೇಖಡಾ ೫ ಭಾಗ ಕನ್ನಡ ಭಾಗವನ್ನು ಪ್ರತಿಪಾದಿಸಿದ್ದಾರೆ. ಇಂತಹ ನಿರ್ಣಯಗಳಿಂದ ಉಭಯ ರಾಜ್ಯಗಳಿಗೂ ಹಿತವಾಗುವುದಿಲ್ಲ.

*** ಕನ್ನಡ ಚಲನ ಚಿತ್ರಗಳು**

ಕನ್ನಡ ಚಿತ್ರಗಳು ರಜತ ಪರದೆಯ ಮೇಲೆ ಬರಲಾರಂಭವಾಗಿ ಕಾಲು ಶತಮಾನವಾಯಿತು.

ಆದರೂ ಕನ್ನಡ ಚಲನ ಚಿತ್ರಗಳಲ್ಲಿ ಯಾವುದೇ ಪ್ರಗತಿ ಕಾಣುತ್ತಿಲ್ಲ. ಕನ್ನಡ ನಾಡಿನಲ್ಲಿ ಒಂದು ಸುಸಜ್ಜಿತ 'ಸ್ಟುಡಿಯೋ' ಇಲ್ಲದಿರುವುದೇ ಇದಕ್ಕೆ ಕಾರಣ ಮತ್ತು ಚಿತ್ರ ನಿರ್ಮಿಸುವ ಅಗಾಧ ಖರ್ಚು ಕನ್ನಡ ಚಿತ್ರ ನಿರ್ಮಾತೃಗಳಿಗೆ ನಿರುತ್ಸಾಹವನ್ನುಂಟು ಮಾಡುತ್ತದೆ. ಪ್ರತಿ ವರ್ಷ ಕನ್ನಡದಲ್ಲಿ ನೂರಾರು ಕಾದಂಬರಿಗಳು ಪ್ರಕಟವಾಗುವಾಗ ಅವುಗಳಲ್ಲಿ ಉತ್ತಮವಾದವುಗಳನ್ನು ಆಯ್ದು ಚಿತ್ರಗಳನ್ನು ತೈಯಾರಿಸಬಹುದು. ಅತಿ ಉತ್ತಮ ಕನ್ನಡ ಚಲನ ಚಿತ್ರಗಳಿಗೆ ರಾಜ್ಯ ಸರ್ಕಾರ ಪಾರಿತೋಷಕ ಕೊಡಲಾರಂಭಿಸಬೇಕು.

*** ಕರ್ನಾಟಕದ ಕಲಾವಿದರಿಗೆ ಪ್ರೋತ್ಸಾಹ**

ಈ ಮುಂಚೆ ಕಲಾವಿದರಿಗೆ ರಾಜಾಶ್ರಯವಿತ್ತು. ಪ್ರಜಾರಾಜ್ಯ ಆರಂಭವಾದಂದಿನಿಂದ ಕರ್ನಾಟಕ ಕಲಾವಿದರಿಗೆ ರಾಜಾಶ್ರಯ ತಪ್ಪಿತು. ಕರ್ನಾಟಕದ ಕಲಾವಿದರಿಗೆ ಪ್ರೋತ್ಸಾಹಗಳು, ಅವಕಾಶಗಳು ಕಡಿಮೆಯಾದವು. ಕನ್ನಡಿಗರ ಮನೆಗಳಲ್ಲಿ ನಡೆಯುವ ವಿವಾಹ ಉಪನಯನಗಳ ಸಮಾರಂಭಗಳಿಗೂ ಮದ್ರಾಸ್‌ನಿಂದಲೇ ಸಂಗೀತಗಾರರು, ನರ್ತಕರು ಬರಬೇಕು. ಆಲ್ ಇಂಡಿಯಾ ರೇಡಿಯೋ ಪರೀಕ್ಷಕರ ಮಂಡಳಿಯಲ್ಲಿ ಕನ್ನಡಿಗರ ಯೋಗ್ಯ ಪ್ರಾತಿನಿಧ್ಯವಿಲ್ಲ. ಇವೆಲ್ಲವುಗಳಿಂದ ಕಲಾವಿದರ ಭವಿಷ್ಯ ಡೋಲಾಯಮಾನವಾಗಿದೆ. ಆದ್ದರಿಂದ ಅವರನ್ನು ಪ್ರೋತ್ಸಾಹಿಸುವ ಕೆಲಸ ನಡೆಯಬೇಕು. ಆಕಾಶವಾಣಿಯ ಕಾರ್ಯಕ್ರಮಗಳಲ್ಲಿ ಕನ್ನಡಿಗರಿಗೇ ಆದ್ಯತೆಯನ್ನು ನೀಡಬೇಕು. ಸಂಗೀತದ ಶಿಕ್ಷಣ ಮತ್ತು ವಿಶ್ವವಿದ್ಯಾಲಯಗಳು ಸ್ಥಾಪಿತವಾಗಬೇಕು.

*** ಕನ್ನಡ ಪತ್ರಿಕೋದ್ಯಮ**

ಇವು ಕ್ರಮೇಣ ಬಂಡವಾಳಸ್ಥರ ಸೊತ್ತಾಗುತ್ತಿವೆ. ಒಂದು ರಾಜಕೀಯ ಪಕ್ಷ ಒಬ್ಬ ವ್ಯಾಪಾರಿಯ ಕೈಗೊಂಬೆಯಾಗುತ್ತಿರುವುದು ಈ ಯುಗದ ಅವಲಕ್ಷಣವಾಗಿದೆ. ಲೋಕದ ಗುರು ಸ್ಥಾನದಲ್ಲಿ ನಿಲ್ಲಬೇಕಾದ ಪತ್ರಿಕೆಗಳು ಎಂತಹ ಆಮಿಷಕ್ಕೆ ಬಲಿಯಾಗುತ್ತಿವೆ. ಇದರಿಂದ ಸ್ವತಂತ್ರ ವಿಚಾರಕ್ಕೆ ಅವಕಾಶವೇ ಇಲ್ಲದಂತಾಗುತ್ತದೆ.

*** ಸರ್ಕಾರದ ಜಾಹಿರಾತುಗಳು**

ಮೈಸೂರು ಸರ್ಕಾರ ತಮ್ಮ ಉದ್ಯೋಗಗಳು ಅವುಗಳ ಸಿದ್ಧಕೃತಿಗಳ ಪ್ರಸಾರಕ್ಕೆ ಪ್ರತಿ ವರ್ಷ ಹತ್ತು ಲಕ್ಷ ರೂಪಾಯಿಗಳನ್ನು ವ್ಯಯ ಮಾಡುತ್ತದೆ. ಈ ಮೊತ್ತ ಮದರಾಸು ಸಂಸ್ಥೆಗೆ ಹರಿದು ಹೋಗುತ್ತದೆ. ಮದರಾಸಿನಷ್ಟೆ ಸಮರ್ಥವಾಗಿ ಈ ಕೆಲಸ ನಿರ್ವಹಿಸಬಲ್ಲ ಸಂಸ್ಥೆಗಳು ಮೈಸೂರಿನಲ್ಲಿ ಇಲ್ಲವೇ?

*** ಜನಗಣತಿ**

ಜನಗಣತಿಯಲ್ಲಿ ಕನ್ನಡಿಗರು ಎಚ್ಚರವಾಗಿರಬೇಕು. ಗಡಿ ಪ್ರದೇಶದಲ್ಲಿ ಗಣಕರು ಸಂಗ್ರಹಿಸಿದ ಸುಳ್ಳು ಅಂಶಗಳನ್ನೇ ಆಧಾರವಾಗಿಟ್ಟುಕೊಂಡು ಭಾಷಾವಾರು ಪ್ರಾಂತ್ಯ ರೂಪಿಸಲಾಯಿತು. ಬಳ್ಳಾರಿ ಬೆಳಗಾವ್, ಕಾಸರಗೋಡು ಮೊದಲಾದ ಸ್ಥಳಗಳಲ್ಲಿ ಕನ್ನಡಿಗರಲ್ಲದವರು ಗಣಕರಾಗಿದ್ದುಕೊಂಡು ತಮ್ಮ ಭಾಷೆಗಳಲ್ಲೇ ಪ್ರಶ್ನೆಗಳನ್ನು ಕೇಳಿ ಅದರಲ್ಲಿಯೇ ಉತ್ತರ ಪಡೆದು ಕನ್ನಡಿಗರ ಸಂಖ್ಯೆಯನ್ನು ಕುಗ್ಗಿಸಿದರು. ಈ ಬಗ್ಗೆ ಸಕಾಲಿಕ ಪ್ರಚಾರ ಕೈಗೊಂಡು ಗಣಕದೊಂದಿಗೆ ಸಹಕರಿಸಲು ಕನ್ನಡಿಗರನ್ನೆ ಆಯುವ ಕೆಲಸ

ಕೈಗೊಳ್ಳಬೇಕು.

* ಕನ್ನಡಿಗರಿಗೆ ನೌಕರಿಗಳು

ರಾಜ್ಯಗಳಲ್ಲಿ ಸ್ಥಾಪಿಸುವ ಕೇಂದ್ರದ ಕೈಗಾರಿಕಾ ಕೇಂದ್ರಗಳ ನೌಕರಿಗಳಲ್ಲಿ ಸ್ಥಳೀಯರಿಗೆ ಕನಿಷ್ಠ ಶೇಕಡಾ ೫೦ರಷ್ಟು ನೌಕರಿಗೆ ಪ್ರಾತಿನಿಧ್ಯ ನೀಡಬೇಕೆಂದು ಕೇಂದ್ರ ಸರ್ಕಾರ ಆದೇಶ ನೀಡಿದೆ. ಮೈಸೂರಿನಲ್ಲಿರುವ ವಿವಿಧ ಕೈಗಾರಿಕೆಗಳಲ್ಲಿ ಶೇಕಡಾ ೪೦ರಷ್ಟು ಮತ್ತು ಕೆಲವು ಸಂಸ್ಥೆಗಳಲ್ಲಿ ಶೇಕಡಾ ೧೨ರಿಂದ ೧೫ರಷ್ಟು ಕನ್ನಡಿಗರಿದ್ದಾರೆಂದು ಕೆಲವು ಆಧಾರಗಳಿಂದ ತಿಳಿಯಲಾಗಿದೆ. ಕೈಗಾರಿಕಾ ಸಂಸ್ಥೆಗಳಿಂದ ಪರಿಸ್ಥಿತಿ ಇಂತಾದರೆ ಕೇಂದ್ರದ ಆಡಳಿತದಲ್ಲಿರುವ ಅಂಚೆ ತಂತಿ, ರೈಲ್ವೆ ಇಲಾಖೆಯಲ್ಲಿಯೂ ಇದೆ ಗತಿ. ರಾಜ್ಯ ಸರ್ಕಾರವೆ ಕನ್ನಡಿಗರ ಹಿತವನ್ನು ಅಲಕ್ಷಿಸುತ್ತಿದೆ. ಇತ್ತೀಚಿನ ಭಾಷಾ ಅಲ್ಪಸಂಖ್ಯಾತರ ಹಿತ ಸಂರಕ್ಷಣೆಯ ಸೋಗಿನಲ್ಲಿ ಸ್ವಂತ ಭಾಷಾ ಜನತೆಗೆ ಆಗುತ್ತಿರುವ ಅನ್ಯಾಯಗಳು ಅಷ್ಟಿಷ್ಟಲ್ಲ. ಬೆಂಗಳೂರು ದಂಡಿನ ಪ್ರದೇಶಗಳಲ್ಲಿ ಕನ್ನಡ ಪ್ರಾಥಮಿಕ ಶಾಲೆಗಳು ಇಲ್ಲದಿರುವಾಗ ಹೊಸ ಹೊಸ ತೆಲುಗು ತಮಿಳು ಶಾಲೆಗಳನ್ನು ಸರ್ಕಾರ ತೆರೆಯುತ್ತಿದೆ. ಇದು ಕೇವಲ ಬೆಂಗಳೂರಿನ ಸ್ಥಿತಿಯಲ್ಲಿ ಕೋಲಾರದ ಚಿನ್ನದ ಗಣಿ ಪ್ರದೇಶ ಭದ್ರಾವತಿ, ಶರಾವತಿ, ಹಿರಿಯೂರು ಮುಂತಾದ ಹಲವು ಪ್ರದೇಶಗಳಲ್ಲಿ ತಮಿಳರ ಗಡ್ಡೆಗಳಾಗಿವೆ. ಇಲ್ಲಿ ತಮಿಳರೆ ಸ್ಥಳೀಯ ಸಂಸ್ಥೆಗಳಲ್ಲಿ ಸೇರಿಕೊಂಡು ಕನ್ನಡವನ್ನು ತುಳಿಯುತ್ತಿದ್ದಾರೆ.

* ಭಾಷೆಗಳ ಪ್ರಶ್ನೆ

ಕನ್ನಡ ರಾಜ್ಯದ ಆಡಳಿತ ಶಿಕ್ಷಣ ವ್ಯವಹಾರ ಭಾಷೆ ಕನ್ನಡ ಎಂದು ರಾಜ್ಯ ಸರ್ಕಾರ ಕೂಡಲೆ ಘೋಷಿಸಬೇಕು. ಹಿಂದಿಯಾಗಲಿ, ಇಂಗ್ಲೀಷ್ ಆಗಲಿ ಈ ಸ್ಥಾನದಲ್ಲಿ ನಿಲ್ಲಲು ಸಾಧ್ಯವಿಲ್ಲ. ದೇಶ ಭಾಷೆಯಾದ ಹಿಂದಿಯನ್ನು ಕನ್ನಡಿಗರು ಕಲಿಯುವುದಂತು ಅನಿವಾರ್ಯ. ಹಿಂದಿಯೊಂದಿಗೆ ಸಂಸ್ಕೃತವನ್ನು ಕಡ್ಡಾಯವಾಗಿ ಕಲಿಯಲೇಬೇಕು. ನಮ್ಮ ಸಂಸ್ಕೃತಿಯ ತಾಯಿಬೇರು ಸಂಸ್ಕೃತವನ್ನು ಉಪೇಕ್ಷಿಸಿದರೆ ಹಿಂದುತ್ವವೇ ನಾಶವಾಗುತ್ತದೆ. ಹಾಗೆಯೇ ಈ ಭಾಷೆಗಳ ಜೊತೆಗೆ ಇಂಗ್ಲೀಷ್ ಕಡ್ಡಾಯವಾಗಿ ಮಾಡಲೆಬೇಕು. ಈ ಭಾಷೆಯಿಂದ ನಮಗೆ ಹೆಚ್ಚಿನ ಸಹಾಯವಾಗಿದೆ. ನಮ್ಮ ಆಳರಸಕ್ಕೆಗಿದ್ದ ಬ್ರಿಟೀಷರ ಭಾಷೆ ಎಂದು ನಾವು ಇಂಗ್ಲೀಷನ್ನು ಅಲ್ಲಗಳೆಯುವುದಾದರೆ ಅದಕ್ಕೆ ನಷ್ಟವಿಲ್ಲ. ನಮಗೆ ಅಪಾರ ನಷ್ಟ ವಿವಿಧ ದೇಶಗಳ ಸಂಪರ್ಕಕ್ಕೆ ಮತ್ತು ವಿಜ್ಞಾನದ ನೂತನ ಅವಿಷ್ಕಾರಗಳನ್ನ ಕಲಿಯುವುದಕ್ಕೆ ಮತ್ತು ಅರಿಯುವುದಕ್ಕೆ ಇಂಗ್ಲೀಷ್ ಪರಮ ಸಾಧನೆ. ದಾಕ್ಷಿಣಾತ್ಯರು ಹೇಗೆ ಉತ್ತರದ ಒಂದು ಭಾಷೆಯನ್ನು ಕಲಿಯುತ್ತಾರೋ ಹಾಗೆಯೇ ಉತ್ತರೆಯರು ಒಂದು ದಕ್ಷಿಣ ಭಾಷೆಯನ್ನು ಕಡ್ಡಾಯವಾಗಿ ಕಲಿಯಲಬೇಕು.

* ಪಂಚವಾರ್ಷಿಕ ಯೋಜನೆಗಳು

ಪಂಚವಾರ್ಷಿಕ ಯೋಜನೆಗಳಿಂದ ಜನಸಾಮಾನ್ಯರ ನಿತ್ಯ ಜೀವನದ ಸಮಸ್ಯೆಗಳು ಹೆಚ್ಚುತ್ತಾ ಬಂದಿವೆ. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕರೂ ಹೊಟ್ಟೆ ತುಂಬಾ ಅನ್ನ, ಮೈತುಂಬಾ ಬಟ್ಟೆ ದೊರೆಯಲಿಲ್ಲವೆಂಬ ಉದ್ಗಾರ ಜನರ ಬಾಯಿಯಿಂದ ಹೊರಬರುತ್ತಿದೆ. ಇದು ಇಂದಿಗೂ ಪ್ರಸ್ತುತ. ಆದರೆ ಮುಂದುವರೆದು ಅ.ನ.ಕೃ. ಅವರು ಈ ಯೋಜನೆಗಳಿಂದ ನಮಗೆ ತಾತ್ಕಾಲಿಕವಾಗಿ ಕಷ್ಟ ನಷ್ಟಗಳು ಸಂಭವಿಸಿದ್ದರೂ ಕಾಲಾನುಕಾಲದಲ್ಲಿ ಈ ಯೋಜನೆಗಳಿಂದ ದೇಶಕ್ಕೆ ಕ್ಷೇಮವಾಗುತ್ತದೆ.

ಪಂಚವಾರ್ಷಿಕ ಯೋಜನೆಗಳಲ್ಲಿ ಕರ್ನಾಟಕ ರಾಜ್ಯ ಸರ್ಕಾರಕ್ಕೆ ದೊರೆತ ಹಣದ ಮೊತ್ತದಲ್ಲಿ ಕನ್ನಡ ಹಿತರಕ್ಷಣೆಗೂ ಸಂಸ್ಕೃತಿಯ ಹಿತರಕ್ಷಣೆಗೂ ಸಂಸ್ಕೃತಿಯ ಸಂವರ್ಧನೆಗೂ ಮೀಸಲಾಗಿಡಬೇಕು. ಭಾರತದ ಬಗ್ಗೆ ಭಕ್ತಿ ಗೌರವ ದೇಶಾಭಿಮಾನ ತಳೆಯದಿರುವ ಒಂದು ರಾಜಕೀಯ ಪಕ್ಷ ನಾಡಿನ ಸಾಹಿತಿಗಳು ಕಲಾವಿದರನ್ನು ಅನೇಕ ವರ್ಷಗಳಿಂದ ತನ್ನ ಧೋರಣೆಯ ಸಮರ್ಥನೆಗೆ ಬಳಸಿಕೊಳ್ಳುತ್ತಿದೆ. ಇಂಥ ರಾಷ್ಟ್ರಘಾತಕ ಸಂಸ್ಥೆಯ ಕಾರ್ಯಕಲಾಪಗಳನ್ನು ತಡೆಗಟ್ಟಲು ರಾಷ್ಟ್ರೀಯ ಬುದ್ಧಿಜೀವಿಗಳು ಕಂಕಣಬದ್ಧರಾಗಬೇಕಾಗಿದೆ.

*** ಬಂದರು**

ವಿಶ್ವೇಶ್ವರಯ್ಯನವರು ಮೈಸೂರು ದಿವಾನರಾಗಿದ್ದಾಗ ಭಟ್ಕಳಾ ಬಂದರನ್ನು ಸ್ಥಾಪಿಸಲು ತುಂಬಾ ಪ್ರಶ್ನಿಸಿದರು. ಮಂಗಳೂರು, ಮಲ್ಪೆ, ಕಾರವಾರ ಬಂದರುಗಳ ಪ್ರಶ್ನೆ ಹಲವಾರು ವರ್ಷಗಳಿಂದ ತಾಂಡವಾಡುತ್ತಿದ್ದರೂ ಕೇಂದ್ರ ಸರ್ಕಾರ ಯಾವ ಗಮನವನ್ನು ಇತ್ತಿಲ್ಲ. ಕರ್ನಾಟಕಕ್ಕೆ ಒಂದಾದರೂ ಸರ್ವಋತು ಬಂದರಿಲ್ಲವಾದ್ದರಿಂದ ಅದರ ವ್ಯಾಪಾರ ವಾಣಿಜ್ಯ ಉದ್ಯೋಗಗಳು ಉಚ್ಛ್ರಾಯ ಹೊಂದುವುದು ಕಷ್ಟ. ಮಂಗಳೂರು, ಕಾರವಾರ ಸರ್ವಋತು ಬಂದರುಗಳು ಯೋಗ್ಯವಾಗಿವೆ ಎಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಈ ಬಂದರುಗಳು ಒಂದು ಕಾಲದಲ್ಲಿ ಇತಿಹಾಸ ಪ್ರಸಿದ್ಧವಾಗಿದ್ದವು. ಕಾರವಾರದಲ್ಲಿ ದ್ವಿತೀಯ ನೌಕಾಂಗಣವನ್ನೇ ಏರ್ಪಡಿಸುವ ಮಾತು ಕೇಳಿಬರುತ್ತಿದ್ದು ಆ ಅವಕಾಶ ಕೇರಳಕ್ಕೆ ಹೋಯಿತು. ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಮತ್ತೆ ಕನ್ನಡನಾಡಿಗೆ ಅನ್ಯಾಯ ಮಾಡಿ ಬಂಗಾಳದ ಬಂದರಿಗೆ ಪ್ರಾಶಸ್ತ್ಯ ನೀಡಲಾಯಿತು. ಏನೇ ಅಭಿವೃದ್ಧಿ ಯೋಜನೆಯಲ್ಲಿಯೂ ಈ ವಿಷಯವನ್ನು ಕೈಬಿಟ್ಟು ತುತ್ತುಕುಡಿ ಬಂದರಿನ ಅಭಿವೃದ್ಧಿ ಕಾರ್ಯಕೈಗೊಳ್ಳಲು ನಿರ್ಧರಿಸಲಾಗಿತ್ತು. ಇದರಿಂದ ತಿಳಿಯುವುದೇನೆಂದರೆ ಕೇಂದ್ರ ಸರ್ಕಾರಕ್ಕೆ ನಮ್ಮ ರಾಜ್ಯ ಸರ್ಕಾರದ ಮೇಲೆ ಪ್ರಭಾವ ಬೀರಲು ನಮ್ಮ ರಾಜ್ಯ ಸರ್ಕಾರ ನಾಯಕರುಗಳಿಗೆ ಸಾಧ್ಯವಿಲ್ಲವೆಂದು ಊಹಿಸಲು ಅವಕಾಶವಿದೆ.

*** ಹೊರನಾಡಿನಲ್ಲಿ ಕನ್ನಡ**

ಕನ್ನಡ ಕಂಪನ್ನು, ಪೆಂಪನ್ನು ಪಸರಿಸುವಲ್ಲಿ ಹೊರನಾಡ ಕನ್ನಡಿಗರ ಪಾತ್ರ ತುಂಬಾ ಮಹತ್ವದ್ದಾಗಿದೆ. ಹೊರನಾಡಿನ ಕನ್ನಡಿಗರು ಎಚ್ಚೆತ್ತುಕೊಂಡು ಅಲ್ಲಲ್ಲಿ ಸಂಘ ಸಂಸ್ಥೆಗಳನ್ನು ಸ್ಥಾಪಿಸಿ ಕನ್ನಡದ ಹಿತಕ್ಕೆ ದುಡಿಯುವಂತಿರುವುದು ಆಶಾದಾಯಕವಾಗಿದೆ. ಭಾರತದ ವಿವಿಧ ಭಾಗಗಳಲ್ಲಿ ಹೊರನಾಡಿನಲ್ಲಿ ಕನ್ನಡಿಗರ ಸಮ್ಮೇಳನಗಳು ಜರುಗಿದವು. ಮುಂಬೈ ಕನ್ನಡಿಗರ ಒಂದು ಡೈರಕ್ಟರಿ ಪ್ರಕಟಿಸುವ ಕೆಲಸವು ಮುಂಬೈನಲ್ಲಿ ನಡೆಯುತ್ತದೆ. ಹೊರನಾಡುಗಳಲ್ಲಿರುವ ಕನ್ನಡ ಮಕ್ಕಳು ಮನೆಯಲ್ಲಿ ಕನ್ನಡ ಮಾತನಾಡುತ್ತಿದ್ದರೂ ಅವರಿಗೆ ಬರೆಯುವುದಕ್ಕೆ ಓದುವುದಕ್ಕೆ ಬಾರದು. ಪರಿಸ್ಥಿತಿ ಹೀಗೆ ಮುಂದುವರಿದರೆ ಮುಂದಿನ ಪೀಳಿಗೆಗೆ ಕನ್ನಡದ ಸಂಪರ್ಕವೇ ಇಲ್ಲವಾಗುತ್ತದೆ. ರಾಜ್ಯ ಸರ್ಕಾರ ಹಾಗೂ ಸಾಹಿತ್ಯ ಪರಿಷತ್ ಇಂಥ ಸಂಘ ಸಂಸ್ಥೆಗಳ ನಿಕಟ ಸಂಬಂಧವನ್ನಿಟ್ಟುಕೊಂಡು ಅವರಿಗೆ ಕಾಲೋಚಿತ ಸಲಹೆ ಪರಿಹಾರಗಳನ್ನು ನೀಡಬಹುದು.

*** ಗಡಿನಾಡಿನ ಪ್ರಶ್ನೆ**

ಹೊರನಾಡಿನ ಕನ್ನಡಿಗರಂತೆ ಗಡಿನಾಡಿನ ಕನ್ನಡಿಗರ ಸ್ಥಿತಿಯು ಗಂಭೀರವಾಗಿದೆ. ೧೯೫೬ರಲ್ಲಿ

ಪ್ರಾಂತ ಪುನರ್ವಿಂಗಡನೆ ನಡೆಯಿತು. ಈ ಭಾಷಾವಾರು ಪ್ರಾಂತ ರಚನೆಯ ನೀತಿಯಂತೆ ವಿಶಾಲ ಮೈಸೂರು ಎಂಬ ಅಭಿಮಾನದಲ್ಲಿ ಕರ್ನಾಟಕವು ರೂಪಗೊಂಡಿತು. ಈ ವಿಂಗಡನೆಯ ಫಲವಾಗಿ ೩೫ ಲಕ್ಷ ಪ್ರಜಾ ಸಂಖ್ಯೆಯುಳ್ಳ ೭,೦೦೦ ಚದುರ ಮೈಲುಗಳಷ್ಟು ವಿಸ್ತೀರ್ಣದ ಪ್ರದೇಶ ಆಂಧ್ರ, ಮುಂಬೈ, ಮಹಾರಾಷ್ಟ್ರ, ಮದರಾಸು, ಕೇರಳ ಪ್ರಾಂತಗಳಿಗೆ ಸೇರಿತು. ಬೆಳಗಾವ್ ಜಿಲ್ಲೆಯ ೧೪,೩೪,೯೬೫ ಜನ ಕನ್ನಡಿಗರು ಮಹಾರಾಷ್ಟ್ರದ ನೊಗವನ್ನು ಅನಿವಾರ್ಯವಾಗಿ ಹೊರಬೇಕಾಯಿತು. ಸೊಲ್ಲಾಪುರದ ಬಹುಭಾಗವು ಕನ್ನಡ ಮತ್ತು ಕನ್ನಡಿಗರಿಂದ ಆವರಿಸಿದೆ. ದಕ್ಷಿಣ ಸತಾರಾ ಜಿಲ್ಲೆಯ ಜತ್ ತಾಲೂಕಿನ ಬಹು ಭಾಗವೆಲ್ಲಾ ಅಪ್ಪಟ ಕನ್ನಡ ಪ್ರದೇಶವಾಗಿದೆ. ಇದು ನ್ಯಾಯವಾಗಿ ಬಿಜಾಪುರ ಜಿಲ್ಲೆಗೆ ಸೇರಬೇಕಾದ್ದು. ಸೊಲ್ಲಾಪುರ ನಗರವನ್ನೊಳಗೊಂಡ ದಕ್ಷಿಣ ಸೊಲ್ಲಾಪುರ ತಾಲೂಕು ನಿರ್ವಿವಾದವಾಗಿ ಕರ್ನಾಟಕಕ್ಕೆ ಸೇರಬೇಕು. ಈ ತಾಲೂಕಿನ ಶೇಕಡಾ ೮೦ರಷ್ಟು ಜನರು ಕನ್ನಡಿಗರು. ಧಾರ್ ಸಮಿತಿಯು ಸೊಲ್ಲಾಪುರ ನಗರವನ್ನೊಳಗೊಂಡ ಸೊಲ್ಲಾಪುರ ಮತ್ತು ಅಕ್ಕಲಕೋಟೆ ತಾಲೂಕುಗಳು ಅಚ್ಚಗನ್ನಡ ಪ್ರದೇಶವೆಂದು ಸಾರಿತು. ಕಂಪನಿ ಸರ್ಕಾರದ ಕಾಲದಲ್ಲಿ ಈ ಪ್ರದೇಶದ ಕಲೆಕ್ಟರ್ ಆಗಿದ್ದ ಮನ್ರೋ 'These people speak the Kanarese Language as it is spoken in Mysore, Bellary and Sandur. The people here are very of anxious to join their co-linguistics from the point of view of administrative convenience and language affinity' (Vide Life of Munroe - H R Bhatnagar, Part - II) ಎಂದು ಬರೆದಿದ್ದಾನೆ. ಆಂಧ್ರ ಪ್ರಾಂತದ ರಚನೆಯಾದಾಗ ಬಳ್ಳಾರಿಯ ಪ್ರಮುಖ ತಾಲೂಕುಗಳನ್ನು ಕಳೆದುಕೊಳ್ಳಬೇಕಾಯಿತು. ಮೈಸೂರಿಗೆ ಸೇರಿಕೊಂಡಂತೆ ನೈಋತ್ಯ ದಿಕ್ಕಿನಲ್ಲಿ ನೀಲಗಿರಿಯ ಬೆಟ್ಟಗಾಡು ಜಿಲ್ಲೆ ಇದೆ. ಗೂಡಲೂರು ಉದಕಮಂಡಲ, ಕೂನೂರು ಈ ಮೂರು ತಾಲೂಕುಗಳು ಈ ಜಿಲ್ಲೆಯಲ್ಲಿವೆ. ಇದರ ಒಟ್ಟು ಜನಸಂಖ್ಯೆಯು ಶೇಕಡಾ ೬೦ರಷ್ಟು, ಇದರ ಪೂರ್ವಕ್ಕೆ ಕಾವೇರಿ ನದಿಯ ಪಶ್ಚಿಮಕ್ಕೆ ಕೊಳ್ಳೆಗಾಲ, ಬರಗೂರು, ತಾಳವಾಡಿ ಫಿರ್ಕಾಗಳಿವೆ. ಕೊಳ್ಳೆಗಾಲ ಮೈಸೂರಿಗೆ ಸೇರಿಸಿ ತಾಳವಾಡ ಮದರಾಸಿನಲ್ಲಿದೆ. ಬರಗೂರು ನೀಲಗಿರಿ ಬೆಟ್ಟಪ್ರದೇಶಗಳಲ್ಲಿ ಶೇಕಡಾ ೭೦ರಷ್ಟು ಜನ ಕನ್ನಡಿಗರು. ಕಾವೇರಿ ನದಿಯ ಪೂರ್ವಕ್ಕೆ ಬೆಂಗಳೂರು ಜಿಲ್ಲೆಗೆ ಹತ್ತಿಕೊಂಡಿರುವ ಹೊಸೂರು, ಕೃಷ್ಣಗಿರಿ, ಸೇಲಂ ಜಿಲ್ಲೆಗೆ ಸೇರಿಸಲ್ಪಟ್ಟಿರುವ ಕನ್ನಡ ಪ್ರದೇಶಗಳು ಪ್ರಾಂತ ಪುನರಚನೆಯ ಕಾಲಕ್ಕೆ ಕಾಸರಗೋಡು ವೈನಾಪು ತಾಲೂಕುಗಳ ಕನ್ನಡ ಭಾಗಗಳನ್ನು ಕೇರಳಕ್ಕೆ ಸೇರಿಸಲಾಯಿತು. ಕೇರಳಕ್ಕೆ ಸೇರಿಸಲ್ಪಟ್ಟಿರುವ ಕಾಸರಗೂಡಿನ ಜನರ ಗೋಳು ಕಷ್ಟ ಹೇಳತೀರದು. ನಮ್ಮ ಕೈಬಿಟ್ಟು ಹೋದ ಕನ್ನಡ ಭಾಗಗಳನ್ನು ಪುನಃ ದೊರಕಿಸುವುದಕ್ಕೆ ಯಾವ ಸಂಘಟಿತ ಪ್ರಯತ್ನವೂ ನಡೆದಿಲ್ಲ. ತಮ್ಮದಲ್ಲದೇ ಬೆಳಗಾವಿಯನ್ನು ಮರಾಠಿಗರು ತಮ್ಮ ರಾಜ್ಯಕ್ಕೆ ಸೇರಿಸುವ ಪ್ರಯತ್ನ ಮಾಡುತ್ತಲೆ ಇದ್ದಾರೆ. ಈ ಸ್ಥಿತಿಯಲ್ಲಿಯೂ ರಾಜ್ಯ ಸರ್ಕಾರ ತಾಟಸ್ಥ್ಯ ಧೋರಣೆ ತಳೆದಿರುವುದು ವಿಷಾದಕರ. ಈ ಪ್ರದೇಶಗಳ ಜನರು ಸಂಘಟಿತರಾಗಿ ತಮ್ಮ ನ್ಯಾಯದ ಹಕ್ಕು ಬಾಧ್ಯತೆಗಳನ್ನು ಶಾಂತ ರೀತಿಯಲ್ಲಿ ಕೇಂದ್ರ ಸರ್ಕಾರದ ಗಮನಕ್ಕೆ ತರಬೇಕು. ಕೇಂದ್ರ ಸರ್ಕಾರ ನಕಾರ ಹೇಳದಂತೆ ಒತ್ತಾಯಪಡಿಸುವುದು. ರಾಜ್ಯ ಸರ್ಕಾರದ ಹೊಣೆ ಮತ್ತು ಸಮಸ್ತ ಕನ್ನಡಿಗರ ಹೊಣೆಯು ಆಗಿದೆ.

ಹೀಗೆ ಕನ್ನಡ ನಾಡು ಎದುರಿಸುತ್ತಿರುವ ಸಮಸ್ಯೆಗಳು ಹಲವಾರಿವೆ. ಈಗ ಸ್ಥಾಪಿತವಾಗಿರುವ ರಾಜ್ಯ

'ಕನ್ನಡನಾಡು' ಎಂಬ ಭಾವನೆಯನ್ನು ದೃಢವಾಗಿ ಜನಗಳ ಮನಸ್ಸಿನಲ್ಲಿ ಬಿತ್ತಬೇಕು. ನಾಡು ಅವಿಭಾಜ್ಯವಾಗಿ ಉಳಿಯುವಂತೆ ಸರ್ಕಾರ ಹಾಗೂ ಸಾರ್ವಜನಿಕರು ಸತತ ಪ್ರಯತ್ನ ಕೈಗೊಳ್ಳಬೇಕು. ಅಖಂಡ ಕರ್ನಾಟಕದ ರಕ್ಷಣೆಗೆ ಜನ ಕಂಕಣಬದ್ಧರಾಗಬೇಕು. ಯಾವ ಜಾತಿ, ಮತ, ಪಂಥ, ಕೋಮಿನ ದಾಕ್ಷಿಣ್ಯಕ್ಕೂ ಕಟ್ಟುಬಿದ್ದು ಕರ್ನಾಟಕವನ್ನು ಮತ್ತೆ ಒಡೆಯಲು ಅವಕಾಶ ಕೊಡಬಾರದು. ಯಾಕೆ ನಮಗೆ ಈ ಸಮಸ್ಯೆಗಳು ಕಾಡಹೊರಟಿವೆ? ಇವುಗಳ ಪರಿಹಾರಕ್ಕೆ ಇಂದಿಗೂ ಕಾದು ನೋಡುವ ತಾಳ್ಮೆಯು ಕನ್ನಡಿಗರ ವಿವೇಕವೆಂದು ಹೇಳಬಹುದೆ? ಸಾಹಿತ್ಯ ಸಮ್ಮೇಳನಗಳಲ್ಲಿ ಕೇವಲ ಸಾಹಿತ್ಯವೊಂದೇ ಚರ್ಚೆಯಾಗಬೇಕಿಲ್ಲ. ಮೂಲತಃ ಈ ಸಮ್ಮೇಳನಗಳು ಆರಂಭಗೊಂಡಿರುವುದೇ ನಾಡಲ್ಲಿ ಕನ್ನಡದ ಜಾಗೃತಿಯನ್ನು ಮೂಡಿಸುವ ಸಲುವಾಗಿಯೇ ಸಾಹಿತ್ಯಕ್ಕಿಂತ ಜನತೆ ದೊಡ್ಡದು; ಜನ ಬದುಕಿದರೆ ಸಾಹಿತ್ಯ ಸಾಹಿತ್ಯ ನಾವು ಸೃಜಿಸುವುದಾದರೂ ಯಾರಿಗೆ? ಜನಕ್ಕಲ್ಲವೆ? ಎನ್ನುತ್ತಾರೆ. ಅ.ನ.ಕೃ.[೬]

೧. **ಪ್ರಾಚೀನ ಕನ್ನಡ ಗ್ರಂಥಗಳ ರಕ್ಷಣೆ**

ಕನ್ನಡನಾಡಿನಲ್ಲಿ ಇನ್ನೂ ಬಯಲಿಗೆ ಬರದಿರುವ ಗ್ರಂಥಗಳ ಕೈಬರಹದ ಪ್ರತಿಗಳು ವಿಫುಲವಾಗಿವೆ. ಇವುಗಳನ್ನು ಉದ್ಧರಿಸುವ ಯತ್ನವಾಗಲಿ, ಇವುಗಳ ಸಂಶೋಧನೆಯಾಗಲಿ ಸಾಕಷ್ಟು ಪ್ರಮಾಣದಲ್ಲಿ ನಡೆದಂತೆ ಕಂಡುಬರುವುದಿಲ್ಲ. ಎಷ್ಟೋ ಮಹತ್ವದ ಗ್ರಂಥಗಳು ನಾಶವಾಗುತ್ತಲಿವೆ. ಜೈನ, ವೀರಶೈವ, ಮಠಗಳಲ್ಲಿಯೂ ಹಲಕೆಲವು ಪಂಡಿತರ ಮನೆಯಲ್ಲಿಯೂ ಹಸ್ತಲಿಖಿತ ಪ್ರತಿಗಳು ಹೇರಳವಾಗಿ ದೊರೆಯುತ್ತವೆ. ಅವು ಗದ್ದುಗೆಯ ಮೇಲೆ ಹುಳುವಿಗೆ ನೈವೇದ್ಯವಾಗುತ್ತಿವೆ. ಇಂಥ ಗ್ರಂಥಗಳನ್ನು ರಕ್ಷಣೆ ಮಾಡಬೇಕು. ಈ ಕಾರ್ಯಕ್ಕಾಗಿ ಒಂದು ಸಮಿತಿಯನ್ನು ಏರ್ಪಡಿಸಬಹುದು. ಇಲ್ಲವೇ ಕ.ಸಾ.ಪ. ಅಥವಾ ವಿಶ್ವವಿದ್ಯಾಲಯಗಳು ಈ ಕಾರ್ಯವನ್ನು ಕೈಕೊಳ್ಳಬೇಕು. ಮದ್ರಾಸ್ ಮತ್ತು ಮೈಸೂರು ನಗರಗಳಲ್ಲಿ ಓರಿಯಂಟಲ್ ಲೈಬ್ರರಿಗಳಿದ್ದು ಅಲ್ಲಿ ಪ್ರಾಚೀನ ಗ್ರಂಥಗಳ ಸಂಗ್ರಹ ಕಾರ್ಯ ನಡೆಯುತ್ತಿದೆ. ಅಂತಹ ಒಂದು ಲೈಬ್ರರಿಯು ಉತ್ತರ ಕರ್ನಾಟಕದಲ್ಲಿರುವುದು ಅವಶ್ಯವೆನಿಸಿದೆ.

೨. **ಪ್ರಾಚೀನ ಗ್ರಂಥಗಳ ವಿವರಣಾತ್ಮಕ ಪಟ್ಟಿಗಳು**

ಅಲ್ಲಲ್ಲಿ ಸಂಗ್ರಹಿಸಿಟ್ಟ ಕೈಬರಹದ ಪ್ರತಿಗಳ ವಿವರಣಾತ್ಮಕ ಪಟ್ಟಿಗಳನ್ನು ಬರೆಯಿಸುವುದು ತೀರಾ ಅವಶ್ಯಕ. ಸಂಶೋಧನೆ ಮಾಡುವವರಿಗೆ ಇದು ತೀರಾ ಅವಶ್ಯ/ಸಹಕಾರಿಯಾಗುವುದು.

೩. **ಪ್ರಾಚೀನ ಗ್ರಂಥಗಳ ಪ್ರಕಟಣೆ**

ಪ್ರಾಚೀನ ಗ್ರಂಥಗಳನ್ನು ಶಾಸ್ತ್ರೀಯವಾಗಿ ಶುದ್ಧವಾದ ಮೂಲ ಮಹತ್ವದ ಪಾಠಾಂತರ ಟಿಪ್ಪಣಿಗಳು ಉಪಯುಕ್ತವಾದ ಪ್ರಸ್ತಾವನೆ ಮೊದಲಾದವುಗಳೊಂದಿಗೆ ಅಂದವಾಗಿ ಮುದ್ರಿಸುವ ಅವಶ್ಯಕತೆ ಬಹಳವಾಗಿದೆ. ಈ ಕಾರ್ಯವನ್ನು ವಿಶ್ವವಿದ್ಯಾಲಯದವರು, ಪರಿಷತ್ತಿನವರು ಸಮರ್ಥವಾದ ಮತ್ತಿತರ ಸಂಸ್ಥೆಗಳು ಕೈಗೊಳ್ಳಬೇಕು.

೪. **ಸಾಹಿತ್ಯ ಚರಿತ್ರೆ ಮತ್ತು ಭಾಷಾ ಚರಿತ್ರೆ**

ಕನ್ನಡ ಭಾಷೆಯ ಹಾಗೂ ಸಾಹಿತ್ಯದ ಹುಟ್ಟು ಬೆಳವಣಿಗೆಯನ್ನು ಶಾಸ್ತ್ರೀಯವಾಗಿ ವಿವರಿಸುವ

ಕನ್ನಡ ಭಾಷಾ ಚರಿತ್ರೆ ಹಾಗೂ ಸಾಹಿತ್ಯ ಚರಿತ್ರೆಗಳ ಅವಶ್ಯವಿದೆ.

೫. ಶಬ್ಧಕೋಶ

ಕನ್ನಡದ ಆಳವಾದ ಉಪಯೋಗ ಬೀಳುವ ತೃಪ್ತಿಕರವಾದ ಶಬ್ಧಕೋಶವು ಕನ್ನಡದಲ್ಲಿ ಇಲ್ಲದಿರುವುದು ಒಂದು ಶೋಚನೀಯ ಸಂಗತಿ. ಕನ್ನಡದಲ್ಲಿ ಸಾಕಷ್ಟು ಕೋಶ ಸಾಹಿತ್ಯವಿದೆ. ಏಕಾಕ್ಷರಿ ನಿಘಂಟು, ಕರ್ಣಾಟಕ ಶಬ್ಧಮಂಜರಿ, ಚತುರಾಸ್ಯ ನಿಘಂಟು ಇವೆ ಮೊದಲಾದವುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಈ ಸಾಹಿತ್ಯವನ್ನೆಲ್ಲಾ ಸಂಗ್ರಹಿಸಿ ತೃಪ್ತಿಕರವಾದ ಕೋಶವನ್ನು ನಿರ್ಮಿಸುವ ಕಾರ್ಯವಾಗಿಲ್ಲ.

೬. ವಿಶ್ವಕೋಶ

ಕನ್ನಡಕ್ಕೆ ವಿಶ್ವಕೋಶದ ಅವಶ್ಯಕತೆ ಇದೆ. ಮರಾಠಿಯಲ್ಲಿ ದಿ. ಡಾ. ಕೇತಕರ್ ಅವರ ಪರಿಶ್ರಮದಿಂದ ಜ್ಞಾನಕೋಶವು ಪ್ರಸಿದ್ಧವಾಯಿತು. ಯಾವುದೇ ವಿಷಯದ ಆಳವಾದ ಅಭ್ಯಾಸಕ್ಕೆ ವಿಶ್ವಕೋಶವು ಅತ್ಯಗತ್ಯ. ವಿಶ್ವವಿದ್ಯಾಲಯಗಳು ಪ್ರಾದೇಶಿಕ ಸರ್ಕಾರಗಳ ಸಹಾಯವನ್ನು ಪಡೆದು ಈ ಕಾರ್ಯವನ್ನು ಪ್ರಾರಂಭಿಸಬೇಕು.

೭. ವಿಜ್ಞಾನ ಗ್ರಂಥಗಳು

ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಗ್ರಂಥಗಳ ಅಭಾವವಿಲ್ಲ. ಆದರೆ ವಿಜ್ಞಾನಶಾಸ್ತ್ರವು ಅರ್ವಾಚೀನ ವಾದುದರಿಂದ ಈ ಬಗ್ಗೆ ನಮ್ಮಲ್ಲಿ ಹೇಳಿಕೊಳ್ಳುವಂತಹ ಗ್ರಂಥಗಳು ಹುಟ್ಟಿಲ್ಲ. ವಿಜ್ಞಾನಯುಗವೆಂದು ಹೆಸರಾದ ಯುಗದಲ್ಲಿ ವಿಜ್ಞಾನ ಗ್ರಂಥಗಳು ನಮ್ಮಲ್ಲಿ ಇನ್ನು ಹುಟ್ಟದಿರುವುದು ಒಂದು ದೊಡ್ಡ ಕೊರತೆ.

೮. ಸಂಶೋಧನೆ

ಕನ್ನಡದಲ್ಲಿ ಸಂಶೋಧನೆಯು ನಿರೀಕ್ಷೆಯ ಮಟ್ಟವನ್ನು ಮುಟ್ಟಿಲ್ಲ. ಸಂಶೋಧನೆಗೆ ಬೇಕಾಗುವ ವಿಫುಲವಾದ ಮಾಹಿತಿ ಕನ್ನಡ ನಾಡಿನಲ್ಲಿ ಸಾಕಷ್ಟಿದೆ. ಅದರಲ್ಲಿಯೂ ಜನಪದ ಸಾಹಿತ್ಯದ ಬಗ್ಗೆ ಸಾಕಷ್ಟು ಮಾಹಿತಿ ದೊರೆಯುತ್ತದೆ. ಜನಪದ ಸಾಹಿತ್ಯವು ಅಳಿಸುವ ಮುನ್ನವೇ ಅದರ ಸಂಪಾದನೆ ನಡೆಯಬೇಕಾಗಿದೆ. ನಮ್ಮ ಕರ್ನಾಟಕದ ಇತಿಹಾಸವು ತುಂಬಾ ಉಜ್ವಲವಾದುದು. ಕನ್ನಡ ನಾಡಿನ ಅರಸು ಮನೆತನಗಳ ಬಗ್ಗೆ ಸಾಕಷ್ಟು ಸಂಗತಿಗಳು ಉಪಲಬ್ಧವಾಗಿಲ್ಲ. ಆದ್ದರಿಂದ ಕರ್ನಾಟಕದ ನಿಜವಾದ ಇತಿಹಾಸ ಬರೆಯುವ ಅವಶ್ಯಕತೆ ಇದೆ. ಕನ್ನಡ ಸಾಹಿತ್ಯದ ಹುಟ್ಟು ಬೆಳವಣಿಗೆಗೆ ಅದರ ಸರಿಯಾದ ಕಾಲ ಮತ್ತು ಇತರ ಭಾಷೆಗಳೊಂದಿಗಿನ ಸಂಬಂಧವನ್ನು ಸಂಶೋಧಿಸುವುದು ಅವಶ್ಯ ವಾಗಿದೆ. ಧಾರ್ಮಿಕ ಕ್ಷೇತ್ರದಲ್ಲಿಯೂ ಸಂಶೋಧನೆಯ ಅವಶ್ಯಕತೆಯಿಂದ ಎಲ್ಲಾ ಧರ್ಮಗಳ ತತ್ವ ಒಂದೇ. ಆ ತತ್ವ ಹೇಗೆ ಒಂದೇ ಆಗಿದೆ ಎನ್ನುವುದನ್ನು ಸಂಶೋಧಿಸಬೇಕಾಗಿದೆ.

೯. ಕನ್ನಡ ಸಾಹಿತ್ಯದ ಬೆಳವಣಿಗೆ

ಕನ್ನಡ ಸಾಹಿತ್ಯದ ಬೆಳವಣಿಗೆ ತೃಪ್ತಿಕರವಾಗಿಲ್ಲ. ನೆರೆಹೊರೆಯ ಇತರೆ ಭಾಷೆಗಳಲ್ಲಿ ನಡೆಯುವಷ್ಟು ಸಾಹಿತ್ಯ ವೃದ್ಧಿ ನಮ್ಮಲ್ಲಿ ನಡೆಯುತ್ತಿಲ್ಲ. ಇದಕ್ಕೆ ಕಾರಣ ಗ್ರಂಥ ಪ್ರಕಟಣೆಯು ಒಂದಾಗಿದೆ. ಸಾಮಾನ್ಯ ಜನತೆ ಇದಕ್ಕೆ ಕನ್ನಡ ಗ್ರಂಥಗಳನ್ನು ಕೊಂಡು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕು. ಸಾಮಾನ್ಯ

ಜನತೆ ಇದಕ್ಕೆ ಸಹಕರಿಸಬೇಕು. ಕನ್ನಡ ಗ್ರಂಥಗಳನ್ನು ಕೊಂಡು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕು.

### ೧೦. ಶಿಕ್ಷಣ ಪ್ರಸಾರ

ನಾಡಿನ ಸರ್ವತೋಮುಖ ಅಭಿವೃದ್ಧಿಗೆ ಶಿಕ್ಷಣ ಪ್ರಸಾರವು ಅತ್ಯವಶ್ಯ. ಇಂದಿನ ಪ್ರಜಾ ಪ್ರಭುತ್ವ ಯಶಸ್ವಿಯಾಗಬೇಕಾದರೆ ಎಲ್ಲರು ಸುಶಿಕ್ಷಿತರಾಗುವುದು ಅಗತ್ಯ. ಕಳೆದ ಕೆಲವು ವರ್ಷಗಳಿಂದ ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿಗೆ ಅಭಿವೃದ್ಧಿಯನ್ನು ಕಾಣಬಹುದು. ಆದರೆ ತೃಪ್ತಿಕರವಾಗಿಲ್ಲ. ಆದುದರಿಂದ ಸಾಕ್ಷರತೆಯ ಬಗ್ಗೆ ಎಷ್ಟು ಗಮನವಿತ್ತರೂ ಕಡಿಮೆಯೇ.

### ೧೧. ಕನ್ನಡ ಪಠ್ಯಪುಸ್ತಕಗಳು

ಶಿಕ್ಷಣ ಪ್ರಸಾರ ಕಾರ್ಯದಲ್ಲಿ ಒಳ್ಳೆಯ ಪಠ್ಯ ಪುಸ್ತಕಗಳ ಅವಶ್ಯಕತೆ ತುಂಬಾ ಇದೆ. ಈ ಪ್ರಚಲಿತವಿರುವ ಪಠ್ಯಪುಸ್ತಕಗಳು ತೃಪ್ತಿಕರವಾಗಿಲ್ಲ. ಪಠ್ಯ ಪುಸ್ತಕ ರಚಿಸುವುದು ಕೆಳಗಿನ ತತ್ವಗಳನ್ನು ಲಕ್ಷ್ಯದಲ್ಲಿಡುವುದು ವಿಹಿತ.

೧. ಪಾಠಗಳು ಮಕ್ಕಳ ವಯಸ್ಸಿಗೂ ಅವರ ಬುದ್ಧಿ ವಿಕಾಸದ ಮಟ್ಟಕ್ಕೂ ಅನುಸರಿಸಿರಬೇಕು.

೨. ಭಾಷೆ ಶೈಲಿ ವಿಷಯ ಇವು ಮಕ್ಕಳ ಶಬ್ಧ ಸಂಗ್ರಹ ಮತ್ತು ಗ್ರಹಣಶಕ್ತಿಗಳಿಗೆ ನಿಲುಕುವಂತಿರಬೇಕು.

೩. ಪಠ್ಯಗಳ ವಿಷಯ ಪ್ರಧಾನವಾಗಿರದೆ ಸಾಹಿತ್ಯ ದೃಷ್ಟಿಯಿಂದ ಮಕ್ಕಳ ಮನಸ್ಸನ್ನು ಸೆಳೆಯುವಂತಿರಬೇಕು.

೪. ಪಠ್ಯಗಳು ಮಕ್ಕಳ ಜ್ಞಾನ, ಅಭಿರುಚಿ, ಶಬ್ಧ ಸಂಗ್ರಹ ಇವುಗಳನ್ನು ಕ್ರಮವಾಗಿ ವಿಕಾಸಗೊಳಿಸುವಂತಿರಬೇಕು.

೫. ಪಾಠಗಳು ನಮ್ಮ ರೀತಿ, ನೀತಿ ರಾಷ್ಟ್ರದ ಸಂಸ್ಕೃತಿ ಇವುಗಳಿಗೆ ಪೋಷಕವಾಗುವಂತಿರಬೇಕು.

ಚಿಕ್ಕ ಮಕ್ಕಳಿಗಾಗಿ ಬರೆದ ಪಠ್ಯಪುಸ್ತಕಗಳು ಅಂದವಾದ ಚಂದವಾದ ಮುದ್ರಣ ಚಂದ ಚಂದವಾಗಿ ಚಿತ್ರಣಗಳಿಂದ ಚಿತ್ರಾಕರ್ಷಕವಾಗಿರಬೇಕು. ಇದರಂತೆ ಮಾಧ್ಯಮಿಕ ಮತ್ತು ಉಚ್ಚ ಶಿಕ್ಷಣ ಕ್ರಮದಲ್ಲಿಯೂ ಸರಿಯಾದ ಪಠ್ಯ ಪುಸ್ತಕಗಳಿರುವುದು ಅವಶ್ಯಕ. ಪ್ರತಿಯೊಂದು ವಿಷಯವನ್ನು ಬೇರೆ ಬೇರೆ ವರ್ಗಗಳಲ್ಲಿ ಬೋಧಿಸಲು ಅನುಕೂಲವಾಗುವಂತಹ ಪಠ್ಯಪುಸ್ತಕಗಳಿರುವುದು ಕನ್ನಡ ಬೋಧನಾ ಭಾಷೆಯಲ್ಲಿ ಅವಶ್ಯವಾಗಿದೆ.

### ೧೨. ವೃತ್ತ ಪತ್ರಿಕೆಗಳು

ವೃತ್ತ ಪತ್ರಗಳು ವಿದ್ಯಾಸಂಸ್ಥೆಗಳಷ್ಟೆ ಮಹತ್ವವಾದುವು. ಜನತೆಯಲ್ಲಿ ತಿಳುವಳಿಕೆಯನ್ನು ಹಂಚುವ ಸಾಧನಗಳಲ್ಲಿ ವೃತ್ತ ಪತ್ರಗಳ ಪಾತ್ರ ಮಹತ್ವವಾದುದು. ಅವುಗಳ ಗುಣಮಟ್ಟದಲ್ಲಿ ಸುಧಾರಣೆಯಾಗಬೇಕಾಗಿದೆ. ವೃತ್ತ ಪತ್ರಗಳಲ್ಲಿ ಸಾಹಿತ್ಯವನ್ನು ಇತಿಹಾಸ, ಶಿಲ್ಪಕಲೆ, ಸಂಗೀತ ಮೊದಲಾದ ಸಾಂಸ್ಕೃತಿಕ ವಿಷಯಗಳ ಮೇಲೆ ವಿಮರ್ಶಾತ್ಮಕ ಪರಿಚಯಾತ್ಮಕ ಬೋಧನಾತ್ಮಕ ಲೇಖನಗಳನ್ನು ಬರೆಯಿಸಿ ಜನತೆಯ ದೃಷ್ಟಿಯನ್ನು

ಅವುಗಳ ಕಡೆಗೆ ಹೊರಳಿಸಬೇಕು. ವೈಜ್ಞಾನಿಕ ಕ್ಷೇತ್ರದಲ್ಲಿ ನಡೆಯುತ್ತಿರುವ ಮುಖ್ಯ ಸಂಶೋಧನೆಗಳ ಬಗ್ಗೆ ಸಾಮಾನ್ಯ ಜನರಿಗೆ ತಿಳಿಯುವಂತಹ ಲೇಖನಗಳನ್ನು ಆಗಾಗ ಪ್ರಕಟಿಸುವುದು ಹಿತವಾದುದು.

**೧೩. ಬಾನುಲಿ**

ಬಾನುಲಿ ಕೇಂದ್ರಗಳು ಜನರ ಮನೋರಂಜನೆಯನ್ನು ಗುರಿಯನ್ನಾಗಿಟ್ಟುಕೊಂಡು ಜನತೆಯಲ್ಲಿ ಪ್ರಸಾರಣೆಯಾಗುವುದಕ್ಕಿಂತ ಜನತೆಯ ಜ್ಞಾನ ಪ್ರಸಾರ ಮಾಡುವ ಹೊಣೆಯನ್ನು ಅವು ಹೊರಬೇಕು. ಕನ್ನಡ, ಸಂಸ್ಕೃತಿ, ಧರ್ಮ, ಸಾಹಿತ್ಯ, ಇತಿಹಾಸ, ಕಲೆ ಮೊದಲಾದ ವಿಷಯಗಳ ನ್ನೊಳಗೊಂಡ ಕಾರ್ಯಕ್ರಮಗಳು ಮೇಲಿಂದ ಮೇಲೆ ಚರ್ಚೆಯಾಗಬೇಕು. ಸಂಗೀತ ಶಾಸ್ತ್ರದಲ್ಲಿ ಮಹತ್ವದ ಸ್ಥಾನ ಪಡೆದ ಕರ್ನಾಟಕ ಸಂಗೀತಕ್ಕೆ ತಮ್ಮ ಬಾನುಲಿ ಕೇಂದ್ರಗಳಲ್ಲಿ ಪ್ರಾಧಾನ್ಯತೆ ದೊರೆಯಿತು.[೫] (ಈ ದೂರದರ್ಶನ, ಕಂಪ್ಯೂಟರ್ಗಳು ಈ ಸ್ಥಾನವನ್ನು ಕಬಳಿಸಿವೆ) ಹೀಗೆ ಇವು ನಮ್ಮ ಕನ್ನಡ ನುಡಿಗೆ ಸಂಬಂಧಿಸಿದ ಹಲವಾರು ಸಮಸ್ಯೆಗಳನ್ನು ಎದುರಿಸಿ ಬೆಳೆಯುವುದು ಅವಶ್ಯ ಮತ್ತು ಅನಿವಾರ್ಯವಾಗಿದೆ. ಆದಷ್ಟು ಬೇಗ ಈ ಕಾರ್ಯವನ್ನು ಕೈಗೊಳ್ಳಬೇಕು. ಪ್ರಸ್ತುತದಲ್ಲಿ ಇವುಗಳಲ್ಲಿ ಕೆಲವು ಕಾರ್ಯರೂಪಕ್ಕೆ ಬಂದಿವೆ. ಇನ್ನೂ ಬರಬೇಕಾಗಿದೆ.

ಅಡಿಟಿಪ್ಪಣಿಗಳು

೧. ಪು.ಸಂ. ೧೫೮, ಸಂ.೩

೨. ಪು.ಸಂ. ೨೬೮,೨೭೧, ಸಂ.೩

೩. ಪು.ಸಂ. ೩೧೮, ಸಂ.೨

೪. ಪು.ಸಂ. ೩೧೮, ಸಂ.೨

೫. ಪು.ಸಂ. ೩೧೬, ಸಂ.೨

೬. ಪು.ಸಂ. ೨೫೨, ಸಂ.೩

ಅಧ್ಯಾಯ : ಎಂಟು

## ಸಲಹೆ – ಸೂಚನೆಗಳು

೧೯೧೫ರಲ್ಲಿ ಆರಂಭವಾದ ಕನ್ನಡ ಸಾಹಿತ್ಯ ಪರಿಷತ್ತು ಮುಖ್ಯವಾಗಿ ಹರಿದು ಹಂಚಿಹೋಗಿದ್ದ ಕರ್ನಾಟಕವನ್ನು ಭೌಗೋಳಿಕವಾಗಿ ಮತ್ತು ಭಾವನಾತ್ಮಕವಾಗಿ ಒಗ್ಗೂಡಿಸುವುದು ಆ ಮೂಲಕ ಕನ್ನಡ ನಾಡು–ನುಡಿ, ಸಂಸ್ಕೃತಿ ಇತ್ಯಾದಿಗಳ ಅಭಿವೃದ್ಧಿ ಮತ್ತು ಕನ್ನಡಿಗರಲ್ಲಿ ಐಕ್ಯಕ್ಕೂ, ಹಿತಕ್ಕೂ ಬೆಳವಣಿಗೆಗೂ ಅನುಕೂಲವಾಗುವ ಅನೇಕ ಯೋಜನೆಗಳನ್ನು, ಉದ್ದೇಶಗಳನ್ನು ಇಟ್ಟುಕೊಂಡಿತ್ತು. ಜನರ ಮತ್ತು ಮಹಾರಾಜರ ಪ್ರೋತ್ಸಾಹದ ಮೇರೆಗೆ ಕೆಲವು ಕಾರ್ಯರೂಪಕ್ಕೆ ಬಂದವು. ಇನ್ನು ಸಾಹಿತ್ಯ ಪರಿಷತ್ತು ಉತ್ತಮವಾಗಿ ರೂಪಗೊಳ್ಳಲು ಅಧ್ಯಕ್ಷರು ಕ್ವಚಿತ್ತಾಗಿ ಸಲಹೆಗಳನ್ನು ನೀಡಿದ್ದಾರೆ. ಅವುಗಳನ್ನು ಮುಂದಿನಂತೆ ಗಮನಿಸಬಹುದು.

### ಶಿವಶಂಕರ ಶಾಸ್ತ್ರಿಗಳು

ಬೆಂಗಳೂರಿನ ಸಂಪದಭ್ಯುದಯ ಸಮಾಜದವರು ಕನ್ನಡ ಸಾಹಿತ್ಯ ಸಮ್ಮೇಳನಗಳ ಉದ್ದೇಶಗಳಿಗೆ ಕರ್ನಾಟಕದ ಮಹನೀಯರ ಸಲಹೆ ಕೇಳಿದಾಗ ೧೦.೦೪.೧೯೧೫ರಲ್ಲಿ ಶ್ರೀಗಳು ತಮ್ಮ ಸದುದ್ದೇಶ ಪಂಚಕವನ್ನು ಮುಂದಿಟ್ಟರು.

೧. ಕನ್ನಡದಲ್ಲಿ ವ್ಯವಹಾರ ಹೆಚ್ಚಿದಂತೆ ಕೊರತೆಯಾಗಿ ತೋರುವ ಪಾರಿಭಾಷಿಕ ರಚನೆಯಾಗಬೇಕು.

೨. ಪ್ರಾದೇಶಿಕ ಭಾಷಾ ಭೇದಗಳನ್ನು ನಿವಾರಿಸಿ ಭಾಷೆಯಲ್ಲಿ ಐಕ್ಯತೆಯನ್ನುಂಟುಮಾಡಬೇಕು.

೩. ಹೊಸಗನ್ನಡಕ್ಕೆ ಸರಿಯಾದ ಒಂದು ವ್ಯಾಕರಣ ಹುಟ್ಟಬೇಕು.

೪. ಕನ್ನಡ ನಾಡುಗಳಲ್ಲೆಲ್ಲಾ ಸಮಾನವಾದ ಪಠ್ಯ ಪುಸ್ತಕಗಳಾಗಬೇಕು.

೫. ಕನ್ನಡತನದ ಪ್ರಚಾರವಾಗಬೇಕು.

ಇವು ಇವರ ಮುಖ್ಯ ಸಲಹೆಗಳು. ಕನ್ನಡ ಸಾಹಿತ್ಯ ಪರಿಷತ್ತು ಅಂಗೀಕರಿಸಿದ ಗೊತ್ತುವಳಿಗಳಿಗೆ ಈ ಸಲಹೆಗಳು ಆಧಾರಗಳಾದವು. ಕನ್ನಡದ ಸರ್ವತೋಮುಖ ಬೆಳವಣಿಗೆಯ ದೃಷ್ಟಿಯಿಂದ ಇವು ಇಂದಿಗೂ ಅಗತ್ಯವಾಗಿವೆ.[೧]

### ಬೆನಗಲ್ ರಾಮರಾಯರು

೧. ಕರ್ನಾಟಕ ವ್ಯಾಕರಣ, ಕರ್ನಾಟಕ ಭಾಷಾ ಚರಿತ್ರೆ, ಕರ್ನಾಟಕ ನಿಘಂಟುಗಳು ಇವುಗಳು ಪ್ರೌಢ ಮಾರ್ಗದಲ್ಲಿ ಬರೆಯಿಸುವುದು ಅಥವಾ ಹಾಗೇ ಬರೆಯುವವರಿಗೆ ಸಹಾಯ ಮಾಡುವುದು

೨. ನವೀನಶಾಸ್ತ್ರ ವಿಷಯವಾದ ಕರ್ನಾಟಕ ಗ್ರಂಥಗಳಲ್ಲಿ ಪ್ರಯಾಣಿಸುವುದಕ್ಕೆ ಯೋಗ್ಯವಾದ ಪಾರಿಭಾಷಿಕ ಶಬ್ಧಗಳ ನಿಘಂಟೊಂದನ್ನು ಪ್ರಕಟಗೊಳಿಸುವಿಕೆ.

೩. ತತ್ವ ವಿಚಾರಗಳ ಭೌತಿಕಶಾಸ್ತ್ರ, ಚರಿತ್ರೆ, ಸಾಹಿತ್ಯ ಇವೇ ಮೊದಲಾದ ವಿಷಯಗಳನ್ನು ಕುರಿತು ಗ್ರಂಥಗಳನ್ನು ಬರೆಯಲಿಕ್ಕೆ ಪ್ರೋತ್ಸಾಹವನ್ನುಂಟು ಮಾಡುವುದು ಮತ್ತು ಅವುಗಳನ್ನು ಪ್ರಕಟಿಸುವುದು.

೪. ಕರ್ನಾಟಕ ಭಾಷೆಗೂ ಕರ್ನಾಟಕ ಗ್ರಂಥಗಳಿಗೂ ಸಂಬಂಧಪಟ್ಟ ವಿವಿಧ ಚರ್ಚ್ಯಾಂಶಗಳನ್ನು ವಿಚಾರಪೂರ್ವಕವಾಗಿ ವ್ಯವಸ್ಥೆ ಮಾಡುವುದು.

೫. ಇತರೆ ಭಾಷೆಯಲ್ಲಿರುವ ಉತ್ತಮ ಗ್ರಂಥಗಳನ್ನು ಕನ್ನಡಿಸಿ ಪ್ರಕಟಿಸುವುದು.

೬. ಉತ್ಕೃಷ್ಟವಾದ ಪ್ರಾಚೀನ ಕಾವ್ಯಗಳನ್ನು ಕನ್ನಡ ಸಂಸ್ಥಾನಗಳ ಚರಿತ್ರೆಗಳನ್ನೊಳಗೊಂಡಿರುವ ಗ್ರಂಥಗಳನ್ನು ಕ್ರೋಢೀಕರಿಸಿ ಅವುಗಳನ್ನು ಪರಿಷ್ಕರಿಸಿ ಪ್ರಕಟಿಸುವುದು ಮತ್ತು ಕನ್ನಡ ನಾಡುಗಳ ಪೂರ್ವಸ್ಥಿತಿಯನ್ನು ವಿಶದಗೊಳಿಸುವ ವಸ್ತುಗಳನ್ನು ಸಂಗ್ರಹಿಸಿ ಅವುಗಳನ್ನಿಡುವುದಕ್ಕಾಗಿ ವಸ್ತು ಸಂಗ್ರಹಾಲಯವೊಂದನ್ನು ಏರ್ಪಡಿಸುವುದು.

೭. ಕರ್ನಾಟಕ ಭಾಷಾ ಸಂಸ್ಕರಣ ಕರ್ನಾಟಕ ಗ್ರಂಥಾಭಿವೃದ್ಧಿಗಳನ್ನು ಕುರಿತು ಪಂಡಿತರಿಂದ ರಚಿತವಾದ ಉಪನ್ಯಾಸಗಳನ್ನೊಳಗೊಂಡ ಪತ್ರಿಕೆಗಳನ್ನು ಪ್ರಕಟಿಸುವುದು

೮. ಸ್ವಂತ ವೆಚ್ಚದಿಂದ ಶ್ರೇಷ್ಠವಾದ ಸ್ವವಿರಚಿತ ಗ್ರಂಥಗಳನ್ನು ಮುದ್ರಣಗೊಳಿಸುವ ಗ್ರಂಥಕರ್ತರಿಗೆ ಸಂಭಾವನೆಗಳನ್ನು ಬಿರುದುಗಳನ್ನು ಪರಿಷತ್ತಿನಿಂದ ಕೊಡುವಿಕೆ.

೯. ಕರ್ನಾಟಕ ಭಾಷೆಗೂ ಸಾಹಿತ್ಯಕ್ಕೂ ಸಂಬಂಧಪಟ್ಟ ಅಪೂರ್ವ ವಿಷಯಗಳನ್ನು ಪರಿಶೋಧಿಸುವಲ್ಲಿ ನಿರತರಾಗುವ ವಿದ್ವಾಂಸರಿಗೆ ಪಂಡಿತ ವೇತನಗಳನ್ನು ಕೊಡುವಿಕೆ

೧೦. ಕರ್ನಾಟಕ ಭಾಷೆಯ ಉನ್ನತಿಗೂ ಕರ್ನಾಟಕ ಗ್ರಂಥಾಭಿವೃದ್ಧಿಗೂ ಸಂಬಂಧಪಡುವ ವಿಷಯಗಳನ್ನು ಆ ಸರ್ಕಾರದ ಪರಾಮರ್ಶಕ್ಕೆ ತಂದು ಅದನ್ನು ತೃಪ್ತಿಕರವಾಗಿ ವ್ಯವಸ್ಥೆಪಡಿಸಿಕೊಳ್ಳಲಿಕ್ಕೆ ತಕ್ಕ ಮಾರ್ಪಾಡುಗಳನ್ನು ಮಾಡುವುದು

೧೧. ಮತ್ತು ೧೨ ಕರ್ನಾಟಕದ ಸಕಲ ಪ್ರಾಂತಗಳಲ್ಲಿಯೂ ವಾಚನಾಲಯಗಳನ್ನು ಪುಸ್ತಕ ಭಂಡಾರಗಳನ್ನು ಸ್ಥಾಪಿಸುವಿಕೆ ಮತ್ತು ಕನ್ನಡ ನಾಡುಗಳ ಪ್ರಮುಖರು ಸಮ್ಮೇಳನಗಳನ್ನು ಆಗಾಗ ಏರ್ಪಡಿಸುವುದು ಮತ್ತು ಸಮರ್ಥರಾದ ವಿದ್ವಾಂಸರಿಂದ ಉಪನ್ಯಾಸಗಳನ್ನು ಕೊಡಿಸುವಿಕೆ.[೨]

**ಫ.ಗು. ಹಳಕಟ್ಟಿ**

ನಾವು ಸತತ ಪ್ರಯತ್ನಗಳನ್ನು ವ್ಯವಸ್ಥೆಯಿಂದಲೂ ಸಂಘಟಿತ ಸ್ವರೂಪದಿಂದಲೂ ಮಾಡುವುದು. ಅವುಗಳೆಂದರೆ,

೧. ಯೋಗ್ಯ ಶಿಕ್ಷಣ ಕ್ರಮವನ್ನು ಮಾರ್ಪಡಿಸುವುದು

೨. ಕರ್ನಾಟಕ ಪ್ರಾಚೀನ ಸಂಸ್ಕೃತಿಯನ್ನು ಸಂಶೋಧಿಸುವುದು

೩. ಗ್ರಂಥ ರಚನಾಕಾರರಿಗೆ ವ್ಯವಸ್ಥಿತ ಸ್ವರೂಪ ಕೊಡುವುದು

೪. ಯೋಗ್ಯ ಸಂಘಟನೆ ಮತ್ತು ಪ್ರಚಾರ ಕಾರ್ಯಗಳು[೩]

ತಾತಾಚಾರ್ಯ

ನಾವು ಈ ಸಮ್ಮೇಳಗಳಲ್ಲಿ ನೆರೆದ ಕನ್ನಡ ಭಾಷೆಗೆ ಮಾಡಬೇಕಾದ ಕೆಲಸಗಳು ಎಷ್ಟೋ ಇವೆ.

೧. ಕನ್ನಡ ಭಾಷೆ ತಮಿಳಿನಿಂದ ಹುಟ್ಟಿದುದೆಂದು ಒಂದು ಕಡೆ ತೆಲುಗಿನಿಂದ ಹುಟ್ಟಿದುದೆಂದು ಮತ್ತೊಂದು ಕಡೆಯ ವಾದ ನಮ್ಮ ಕರ್ಣಾಟ ಮಂಡಳಿಯಲ್ಲಿ ಬಹು ಭಾಷಾ ವಿಶಾರದವರು ಹಲವರು ಇರುವುದರಿಂದ ಈ ವಿಷಯವನ್ನು ಎತ್ತಿಕೊಂಡು ಒಂದು ಚರ್ಚೆ ಮಾಡಿ ಇತ್ಯರ್ಥ ಮಾಡಬೇಕು.

೨. ಇದು ಕನ್ನಡ ತಮಿಳು ತೆಲುಗುಗಳಿಗೆ ಸಾಮನ್ಯವಾದ ಅಕ್ಷರವಾದರೆ ಕನ್ನಡ ಶಬ್ಧಗಳಲ್ಲಿ ಸಂದೇಹ ಒದಗಿದಂದು ಕನ್ನಡ ತಮಿಳನ್ನು ಅನುಸರಿಸುವುದು.
ಇಲ್ಲದಿದ್ದರೆ ತೆಲುಗಿನ ಸರಿಹೋಗುವುದೋ?

೩. ಇದು ಕನ್ನಡಕ್ಕೂ ತಮಿಳಿಗೂ ಸಾಮಾನ್ಯವಾದ ಅಕ್ಷರವಾದರೂ ಶಬ್ಧಗಳಲ್ಲಿ ಭೇದವುಂಟೋ? ಸಂಶಯವಾದಾಗ ಅಂತಹ ಶಬ್ಧಗಳಲ್ಲಿ ತಮಿಳೆ ಸರಿಯೆಂದು ಎರ್ಮೆ ನಾಡಿನವರಾದ ನಾವುಗಳು ಅಂಗೀಕರಿಸಬಹುದೋ?

೪. ಕನ್ನಡ ಲಿಪಿಗೂ ತೆಲುಗು ಲಿಪಿಗೂ ಸಾಮ್ಯವಿರುವುದರಿಂದ ಕನ್ನಡ ತೆಲುಗಿನಿಂದ ಬಂದಿತೆಂದು ಹೇಳಲಿಕ್ಕೆ ಸಾಕಷ್ಟೆ? ಇದಲ್ಲದೇ ಇನ್ನೇನಾದರೂ ಪ್ರಬಲವಾದ ಆಧಾರವಿದೆಯೇ?

೫. ವಿಜಯನಗರದ ಅರಸರುಗಳಲ್ಲಿ ಕೃಷ್ಣದೇವರಾಯ ಕನ್ನಡ ವಂಶದವನೋ ಸಾಳ್ವ ವಂಶದವನೋ, ತುಳುವ ವಂಶದವನೋ ಇವನ ಸ್ವ-ಭಾಷೆ ಕನ್ನಡವೋತೆಲುಗೋ ತಮಿಳೋ? ಇವನ ಕಾಲದಲ್ಲಿ ಸಾಹಿತ್ಯಕ್ಕೆ ಪ್ರೋತ್ಸಾಹ ಹೆಚ್ಚಾಗಿತ್ತೋ?

೬. ಕನ್ನಡ ನಾಡಿನ ಮೇರೆಗಳು ಕಾವೇರಿಯಿಂದ ಗೋದಾವರಿಯವರೆಗೆ ಎಂದರೆ ಮೂಡ ಪಡುವಣ ಮೇರೆಗಳು ಕಾಲಕಾಲಕ್ಕೆ ನಿರ್ಣಯಿಸಿರುವ ಆಧಾರಗಳು ಯಾವುವು?

೭. ಕರ್ನಾಟಕ ಗತವೈಭವದಲ್ಲಿ ದೇಶ ಚರಿತ್ರೆಯ ಕೆಲವು ಹೆಗ್ಗುರುತುಗಳು ಕಾಣುತ್ತವೆ. ನಮ್ಮ ಕನ್ನಡ ದೇಶ ಚರಿತ್ರೆಯ ಕಾರ್ಯವನ್ನು ಕೈಗೊಂಡಿರುವ ಮಹಾಶಯರ ಆ ಚರಿತ್ರೆ ಎಂದಿಗೆ ನಮಗೆ ಓದಲಿಕ್ಕೆ ದೊರೆಯುವುದು?

೮. ಕನ್ನಡ ದೇಶದ ಸ್ಥಿತಿ-ಗತಿಗಳನ್ನು ಅನುಭವಿಸಿ ಈಗಿನ ಕಾಲದಲ್ಲಿ ಕಾದಂಬರಿಗಳಾಗಲಿ, ನಾಟಕಗಳಾಗಲಿ ಆಗಿವೆಯೇ? ಆಗುವ ಸಂಭವವೆಂದು?

೯. ಕನ್ನಡ ಭಾಷೆಯಲ್ಲಿ ಈಗಿನ ಕಾಲಕ್ಕೆ ತಕ್ಕ ವ್ಯಾಕರಣವೊಂದಾಗಬೇಕು.

೧೦. ಪ್ರಾಕೃತದಲ್ಲಿ ಹೊಸಗನ್ನಡಕ್ಕೆ ಒಂದು ಪಾರಿಭಾಷಿಕ ನಿಘಂಟು ಅತ್ಯವಶ್ಯಕ ತೋರುವುದು. ಈ ಕೆಲಸವನ್ನು ಪ್ರಜ್ಞರಿಂದ ಮಾಡಿಸಬೇಕಾಗಿರುವುದು.

೧೧. ನವೀನ ಗ್ರಂಥಗಳ ಪ್ರೋತ್ಸಾಹಕ್ಕಾಗಿ ಸರ್ಕಾರದವರು ಅನುಗ್ರಹದಿಂದ ಬಹುಮಾನ ಸ್ಪರ್ಧೆ ಏರ್ಪಡಿಸುವುದು ಶ್ಲಾಘನೀಯ.

೧೨. ಪುರಾತನ ನಾಟಕಗಳ ಪುನರಾವರ್ತನೆಗಿಂತ ಹೊಸ ನಾಟಕಗಳ ರಚನೆ

೧೩. ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಭಾಷೆಯನ್ನು ಪಠಿಸುವ ಉದ್ದೇಶವು ಆಧುನಿಕತೆಗೆ ವಾಹನವಾಗಿರಬೇಕೆಂದು ಅವುಗಳನ್ನು ತಿರಸ್ಕರಿಸಬಾರದು.[೪]

**ವೈ. ನಾಗೇಶಶಾಸ್ತ್ರಿಗಳು**

೧. ಈಚೆಗೆ ಭಾಷೆಯಲ್ಲಿ ಎಷ್ಟೋ ವ್ಯತ್ಯಾಸಗಳಾಗಿರುವವು. ಆ ವ್ಯತ್ಯಾಸಗಳನ್ನು ಪರೀಕ್ಷಿಸಿ ಅವುಗಳಲ್ಲಿ ಅವಶ್ಯವೋ ಅನಿವಾರ್ಯವೋ ಆಗಿರುವ ವ್ಯತ್ಯಾಸಗಳು ಆಕ್ಷೇಪರಹಿತಗಳೆಂದು ಹೇಳುವ ಹೊಸ ವ್ಯಾಕರಣ ಗ್ರಂಥವೊಂದು ಪರಿಷತ್ತಿನ ಪಂಡಿತ ಮಂಡಲದಿಂದ ರಚಿತವಾಗುವುದು ಅವಶ್ಯ. ಕನ್ನಡ ಭಾಷಾ ಶಾಸ್ತ್ರವೂ ಶಾಸ್ತ್ರೀಯ ತತ್ವಗಳನ್ನು ವಿವರಿಸುವ ಗ್ರಂಥಗಳು ಗ್ರಾಮ ಸುಧಾರಣೆಗೆ ಬೇಕಾದ ಸಣ್ಣ ಸಣ್ಣ ಪುಸ್ತಕಗಳು ನಮ್ಮ ಸಾಹಿತ್ಯಕ್ಕೆ ಬೇಕಾಗಿವೆ. ಇವುಗಳನ್ನು ಬರೆಯಿಸುವುದು, ಬರೆಯುವವರಿಗೆ ಪ್ರೋತ್ಸಾಹ ಉಂಟುಮಾಡುವುದು ಪರಿಷತ್ತಿಗೆ ಅವಶ್ಯಕ.

೨. ಕನ್ನಡದಲ್ಲಿ ಮುದ್ರಿತವಾದ ಪ್ರತಿಯೊಂದು ಗ್ರಂಥವೂ ಸಾಹಿತ್ಯ ಪರಿಷತ್ತಿನ ಪುಸ್ತಕ ಭಂಡಾರದಲ್ಲಿ ಸಿಕ್ಕುವಂತೆ ಅದನ್ನು ವೃದ್ಧಿಪಡಿಸಬೇಕು.[೫]

**ದಿವಾಕರ ರಂಗರಾಯರು**

೧. ಕರ್ನಾಟಕದ ಪ್ರತಿಯೊಬ್ಬರೂ ಕನ್ನಡದಲ್ಲಿಯೇ ಓದು ಬರಹವನ್ನು ಕಲಿಯುವಂತೆ ಸರ್ವೇ ಸಾಮಾನ್ಯ ಜ್ಞಾನವನ್ನೆಲ್ಲ ಅವನಿಗೆ ದೊರಕುವಂತೆ ವ್ಯವಸ್ಥೆ ಮಾಡುವುದು

೨. ಅಖಿಲ ಕನ್ನಡ ಮತ್ತು ತತ್ಸಂಬಂಧದ ಪುಸ್ತಕಗಳ ಹಾಗೂ ಹಸ್ತಪ್ರತಿಗಳ ಸಂಪೂರ್ಣ ಪುಸ್ತಕಾಲಯವೊಂದು ನಮಗೆ ಅವಶ್ಯ

೩. ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕ ವಿಶ್ವಧಾಮ ಮಾಡುವ ವಿಚಾರದ ಬಗ್ಗೆ ಪುನಃ ಪ್ರಯತ್ನ

೪. ಕರ್ನಾಟಕ ಗಡಿನಾಡುಗಳ ಸಮಸ್ಯೆಯೊಂದನ್ನು ನಮ್ಮ ಎದುರಿಗೆ ಮೇಲಿಂದ ಮೇಲೆ ಬರುತ್ತದೆ. ನನಗೆ ತಿಳಿದ ಮಟ್ಟಿಗೆ ಅಲ್ಲಿಗೆ ಹೋಗಿ ದೊಡ್ಡ ಉಪನ್ಯಾಸಗಳನ್ನು ಕೊಟ್ಟು ಬಂದರೆ ಸದ್ಯಕ್ಕೆ ವಿಶೇಷ ಉಪಯೋಗವಾಗದು. ಅಲ್ಲಿ ಹೋಗಿ ಒಂದು ಶಾಲೆಯನ್ನು, ವಾಚನಾಲಯವನ್ನು ಹೊರಡಿಸಿ ಕನ್ನಡದ ಅಭಿರುಚಿಯನ್ನು ಹುಟ್ಟಿಸುವ ಶಾಂತ ತಾತ್ವಿಕ ಕಾರ್ಯದ ಅವಶ್ಯಕತೆ ಈಗಿದೆ.

೫. ಕನ್ನಡದ ಮೊಳೆಗಳ ಜೋಡಣೆಯಲ್ಲಿ ಸುಧಾರಣೆಯಾಗಬೇಕು.

೬. ಕನ್ನಡದಲ್ಲಿ ಲಘುಲಿಪಿ ಹಾಗೂ ಟೈಪರೈಟರ್ ಇವುಗಳ ಅತ್ಯಂತ ಅವಶ್ಯಕತೆ ಇದೆ.

೭. ಗ್ರಾಮಫೋನ್, ರೇಡಿಯೋ, ಸಿನಿಮಾ ಮುಂತಾದ ಕ್ಷೇತ್ರಗಳಲ್ಲಿಯೂ ಕನ್ನಡಿಗರು ತಮ್ಮ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸಲಿಕ್ಕೆ ಬೇಕು ಹಾಗೂ ಆ ರೀತಿ ಮಾಡುವವರಿಗೆ ಬಲ ಕೊಡಬೇಕು.[೬]

**ಸಿ.ಕೆ. ವೆಂಕಟರಾಮಯ್ಯನವರು**

೧. ಪುಸ್ತಕಗಳ ಪ್ರಕಟಣೆ

೨. ಜ್ಞಾನದ ಪ್ರಚಾರ ಕಾರ್ಯ

೩. ಅಭಿರುಚಿಯನ್ನು ಮೂಡಿಸುವ ಕಾರ್ಯ ಮಾಡಬೇಕು.[೭]

**ಅ.ನ.ಕೃ.**

೧. ಮಂತ್ರಿಗಳನ್ನು ರಾಜಕಾರಣಿಗಳನ್ನು ಮಠಾಧಿಪತಿಗಳನ್ನು ಪರಿಷತ್ತಿಗೆ ಬರಮಾಡಿಕೊಂಡು ಅವರಿಗೆ ಭಿನ್ನವತ್ತಳೆ ಅರ್ಪಿಸಿ ಅಳತೆ ಮೀರಿ ಹೊಗಳುವುದನ್ನು ಬಿಟ್ಟು ಬಿಡಬೇಕು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರಾಧಾನ್ಯತೆ ಇರಬೇಕಾದುದು ಸಾಹಿತಿಗಳಿಗೆ ವಿನಾ ರಾಜಕಾರಣಿಗಳಿಗಲ್ಲ.

೨. ಪರಿಷತ್ತಿನ ಹಣ ವ್ಯಯ ಮಾಡುವಾಗ ಅಧಿಕಾರಿ ವರ್ಗದವರು ಅತ್ಯಂತ ಎಚ್ಚರವಹಿಸಬೇಕು. ಸಾರ್ವಜನಿಕ ಹಣ ವಿಷ ಪ್ರಾಯವಾದುದೆಂದು ಪರಿಷತ್ತಿನ ಅಧಿಕಾರಿಗಳು ಮರೆಯದಿರಬೇಕು.

೩. ಪರಿಷತ್ತು ವಿದ್ವತ್‌ಪೂರ್ಣ ಭಾಷಣಗಳ ವೇದಿಕೆಯಾಗಬೇಕು. ಈ ಭಾಷಣಗಳನ್ನು ಸಂಗ್ರಹಿಸಿ ಕಿರು ಹೊತ್ತಿಗೆಗಳಾಗಿ ಪ್ರಕಟಿಸಬೇಕು.

೪. ಉದಯೋನ್ಮುಖ ಸಾಹಿತಿಗಳ ರಕ್ಷಣೆ ಪೋಷಣೆಗೆ ಪರಿಷತ್ತು ಪ್ರಥಮ ಸ್ಥಾನ ಕೊಡಬೇಕು.

೫. ಬಡ ಲೇಖಕರ ಕಷ್ಟ ನಿವಾರಣೆಗಾಗಿ ಮಾಸಿಕವಾಗಿ ಅಥವಾ ಮೊತ್ತವಾಗಿ ಧನಸಹಾಯ ಸಹಾಯ ಶೂನ್ಯರಾದ ಲೇಖಕರ ಸಂಸಾರಕ್ಕೆ ಸಹಾಯ ಲೇಖಕರ ಮಕ್ಕಳಿಗೆ ವಿದ್ಯದಾನ ಅದಕ್ಕಾಗಿ ಒಂದು ಮೀಸಲು ನಿಧಿ ಸಂಗ್ರಹವಾಗಬೇಕು.

೬. ಪ್ರಾಚೀನ ಅರ್ವಾಚೀನ ಕಾವ್ಯ ಪರಿಚಯ ಮಾಡಿಕೊಡುವ ವ್ಯಾಸಂಗ ಗೋಷ್ಠಗಳು

೭. ಸೋದರ ಭಾಷೆಗಳಾದ ತಮೀಳು, ತೆಲುಗು, ಹಿಂದಿ, ಬಂಗಾಳಿ ಭಾಷೆಗಳು

ಮತ್ತು ಪರಿಭಾಷೆಗಳಾದ ಗ್ರೀಕ್, ಫ್ರೆಂಚ್, ಜರ್ಮನ್, ಭಾಷೆಗಳ ಮತ್ತು ಸಾಹಿತ್ಯದ ಅಭ್ಯಾಸಕ್ಕೆ ಅನುಕೂಲ ಮಾಡಿಕೊಡಬೇಕು.

೮. ಪರಿಷತ್ತಿನ ಪ್ರಕಟಣಾ ಶಾಖೆಯನ್ನು ಅಭಿವೃದ್ಧಿಪಡಿಸಿ ಉಪಲಬ್ಧವಿಲ್ಲದ ಪ್ರಾಚೀನ ಕಾವ್ಯಗಳು ಪ್ರಕಟವಾಗದಿರುವ ಕಾವ್ಯಗಳನ್ನು ಪ್ರಕಟಿಸುವುದು. ಮಹಾಕವಿ ಪ್ರಶಸ್ತಿ ಗ್ರಂಥಗಳನ್ನು ಪ್ರಕಟಿಸುವುದು.

೯. ಪರಿಷತ್ತಿನ ಕಟ್ಟಡವನ್ನು ವಿಸ್ತರಿಸಿ ಪುಸ್ತಕ ಭಂಡಾರಕ್ಕಾಗಿಯೇ ಪ್ರತ್ಯೇಕವಾದ ಹಜಾರವನ್ನು ಏರ್ಪಡಿಸುವುದು.

೧೦. ಪರಿಷತ್ತಿನ ಮುದ್ರಣಾಲಯವನ್ನು ಸುಧಾರಿಸಿ ಆಧುನಿಕ ಯಂತ್ರೋಪಕರಣಗಳನ್ನು ತೆಗೆದು ಕೊಳ್ಳುವುದು.

೧೧. ಕನ್ನಡ ಪುಸ್ತಕ ಪ್ರಕಾಶಕರು ಪುಸ್ತಕ ವ್ಯಾಪಾರಿಗಳನ್ನು ಸಂಘಟಿಸಿ ಕನ್ನಡ ಪ್ರಕಟಣೆಗಳ ವ್ಯಾಪಕ

ಪ್ರಸಾರಕ್ಕೆ ಅವಶ್ಯಕವಾದ ಮಾರ್ಗ ನಿರ್ದೇಶಿಸುವುದು

೧೨. ಅಂಗ ಸಂಸ್ಥೆಗಳೊಂದಿಗೆ ನಿಕಟ ಸಂಬಂಧವನ್ನಿಟ್ಟುಕೊಂಡು ಅವುಗಳ ಸಹಾಯದಿಂದ ನಾಡಿನ ಎಲ್ಲಾ ಭಾಗಗಳಲ್ಲಿಯೂ ಸಾಹಿತ್ಯ ಪ್ರಸಾರ ಕೈಗೊಳ್ಳುವುದು.

೧೩. ಕೇಂದ್ರ ಸರ್ಕಾರಕ್ಕೂ ಸಾಹಿತ್ಯ ಅಕಾಡೆಮಿ ಸಂಸ್ಥೆಗೂ ಪರಿಷತ್ತಿನ ಕಾರ್ಯವ್ಯಾಪ್ತಿಯ ಪರಿಚಯ ಮಾಡಿಕೊಟ್ಟು ಅದರಿಂದ ಧನಸಹಾಯ ಪಡೆಯುವುದು.

೧೪. ಪರಿಷತ್ತಿನ ಸದಸ್ಯರ ಸಂಖ್ಯೆ ಹೆಚ್ಚಿಸುವುದು. ಕಾರ್ಯಕಾರಿ ಸಮಿತಿಯ ಸದಸ್ಯರು ಪರಿಷತ್ತಿನ ಅಧಿಕಾರಿ ವರ್ಗದವರು ವರ್ಷಕ್ಕೆ ನೂರು ಸದಸ್ಯರನ್ನಾದರೂ ಕೂಡಿಸಿ ಕೊಡಬೇಕೆಂದು ಒತ್ತಾಯ ಪಡಿಸತಕ್ಕದ್ದು.

೧೫. ಗಡಿನಾಡುಗಳಲ್ಲಿಯೂ ಪರ ಪ್ರಾಂತೀಯರ ಧಾಳಿಗೆ ಸಿಕ್ಕಿರುವ ಕೋಲಾರದ ಚಿನ್ನದ ಗಣಿ ಬೆಂಗಳೂರು ಸೊಲ್ಲಾಪುರ, ಬೆಳಗಾವಿ ಕಾರವಾರದಲ್ಲಿ ಕನ್ನಡ ಚಳುವಳಿಯನ್ನು ಬಲಗೊಳಿಸುವುದು

೧೬. ಪ್ರತಿವರ್ಷ ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಪುಸ್ತಕಗಳು ಪತ್ರಿಕೆಗಳು ಒಂದು ಪಟ್ಟಿಯನ್ನು ಪರಿಷತ್ತು ಕ್ರಮವಾಗಿ ಪ್ರಕಟಿಸುತ್ತಾ ಬರಬೇಕು.

೧೭. ಸುಮಾರು ೨೩ ವರ್ಷಗಳಿಂದ ಪರಿಷತ್ತು ಕನ್ನಡ ಸಾಹಿತ್ಯ ಕನ್ನಡ ಸಾಹಿತ್ಯ ಪತ್ರಿಕೆ ತ್ರೈಮಾಸಿಕವನ್ನು ಪ್ರಕಟಿಸುತ್ತದೆ. ೧೯೩೮ರಲ್ಲಿ ಬಿ.ಎಂ. ಶ್ರೀಕಂಠಯ್ಯನವರು ನನ್ನ ಸಂಪಾದಕತ್ವದಲ್ಲಿ ಕನ್ನಡ ಪ್ರಸಾರದ ಸಲುವಾಗಿ ಕನ್ನಡ ನುಡಿ ವಾರಪತ್ರಿಕೆ, ಸ್ಥಾಪಿಸಿದರು. ಕೆಲವು ವರ್ಷಗಳ ನಂತರ 'ಕನ್ನಡ ನುಡಿ' ಮಾಸ ಪತ್ರಿಕೆಯಾಗಿ ಮಾರ್ಪಟ್ಟಿತು.

ಪರಿಷತ್ತು ಯಾವ ವ್ಯಕ್ತಿಯ ಸ್ವತ್ತು ಅಲ್ಲ. ಅದು ಎರಡು ಕೋಟಿ (ಈಗ ಆರು ಕೋಟಿ) ಕನ್ನಡಿಗರ ಹೃದಯ ಕನ್ನಡಿ. ಪರಿಷತ್ತಿನ ದವಳ ಕೀರ್ತಿಗೆ ಕಳಂಕ ಬಾರದಂತೆ ಅದರ ಘನತೆಯನ್ನು ಕಾಪಾಡುವುದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವಾಗಿದೆ. ಈ ನಾಡು-ನುಡಿಗಳ ಪ್ರತೀಕವಾದ ಪರಿಷತ್ತಿಗೆ ದುಡಿದ ಮಹನೀಯರ ಸೇವೆ ಯಾವ ವ್ಯಕ್ತಿಯಿಂದಾಗಲಿ, ಗುಂಪಿನಿಂದಾಗಲಿ, ಅಳಿಸಿ ಹೋಗಲು ನಾವು ಅವಕಾಶ ಕೊಡಬಾರದು.[೮]

ಸಾಹಿತ್ಯದ ಎಲ್ಲಾ ಶಾಖೆಗಳಲ್ಲಿ ಆಗಿರುವ ಪ್ರಗತಿ ಆಗಬೇಕಾದ ಕಾರ್ಯ ಸಾಹಿತ್ಯ ಸಂವರ್ಧನೆಗೆ ಅವಶ್ಯಕವಾದ ವಿಮರ್ಶೆಯ ಸ್ಥಿತಿಗತಿ ಸಾಹಿತ್ಯ ಸೇವಕರ ಮತ್ತು ಪ್ರಕಾಶಕರ ಪರಿಸ್ಥಿತಿ ಈ ಮುಂತಾದ ಸಾಹಿತ್ಯ ಸಂಬಂಧಿಯಾದ ವಿಷಯಗಳಿಗೆ ಸಾಹಿತ್ಯ ಪರಿಷತ್ತು ಮತ್ತು ಸಾಹಿತ್ಯ ಸಮ್ಮೇಳನಗಳು ತಮ್ಮ ಮುಖ್ಯವಾದ ಗಮನವನ್ನೀಯಬೇಕು. ಸಾಹಿತ್ಯದ ಮಂದಿರಕ್ಕೆ ಮೂಲ ಆಧಾರ ಭಾಷೆ. ಅದರ ಶಿಖರ ಸಂಸ್ಕೃತಿ ಭಾಷೆ, ಸಾಹಿತ್ಯ ಈ ಮುಪ್ಪರಿಯ ಮುನ್ನಡೆ ಪರಿಷತ್ತು ಸಮ್ಮೇಳನಗಳ ಹಿರಿಯ ಗುರಿಯಾಗಿರಬೇಕು. ಸಾಹಿತ್ಯ ಸೇವಕರಿಗೆ ಭಾಷಿಕ ರಾಜಕಾರಣ ದೇಶದ ರಾಜಕಾರಣ ಮುಂತಾದ ಅನೇಕ ವಿಷಯಗಳಲ್ಲಿ ಆಸ್ಥೆಯಿರಬಹುದು. ಹಾಗೆಂದು ಸಾಹಿತ್ಯದ ವೇದಿಕೆಯನ್ನು ರಾಜಕೀಯ ರಣರಂಗವಾಗಿಸಬಾರದು. ಭಾಷೆ-ಭಾಷೆಗಳ ಅನ್ಯೋನ್ಯ ಸಂಬಂಧ, ಭಾಷಾನುಗುಣ ಪ್ರಾಂತ ರಚನೆಯಿಂದ ತಲೆಯೆತ್ತಿದ ಸಮಸ್ಯೆಗಳು ಇವನ್ನು ಸಾಹಿತ್ಯ ಪರಿಷತ್ತು ಹಾಗೂ ಸಮ್ಮೇಳನಗಳು ತಾತ್ವಿಕ ದೃಷ್ಟಿಯಿಂದ ಪರಿಶೀಲಿಸಬೇಕು. ಆಂದೋಲನ

ದೃಷ್ಟಿಯಿಂದಲ್ಲ.[೯] ಪ್ರತಿ ವರ್ಷ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಪರಿಷತ್ತು ಆ ವರ್ಷದ ಸಾಹಿತ್ಯ ಸಮಾಲೋಚನೆಯನ್ನು ತನ್ನ ವರದಿಯ ಅಂಗವಾಗಿ ಪ್ರಕಟಿಸಬಹುದು.'[೧೦]

ಕನ್ನಡ ಭಾಷೆಯನ್ನು ಸಾಹಿತ್ಯವನ್ನೂ ಪುಷ್ಟಿಗೊಳಿಸಿ ಅಭಿವೃದ್ಧಿಗೆ ತಂದು ಕನ್ನಡ ನಾಡುಗಳ ಜನರೆಲ್ಲರನ್ನೂ ಒಟ್ಟುಗೂಡಿಸಿ ಅದರಲ್ಲಿ ಭಾಷಾ ವಿಷಯದಲ್ಲಿ ಪರಸ್ಪರ ಐಕ್ಯಮತ್ಯವು ಸೌಹಾರ್ದವೂ

ದಿನದಿನಕ್ಕೆ ಹೆಚ್ಚುವಂತೆ ಮಡುವುದೇ ಕರ್ನಾಟಕ ಸಾಹಿತ್ಯ ಪರಿಷತ್ತಿನ ಮುಖ್ಯ ಉದ್ದೇಶವಾಗಿದೆ.[೧೧]

ಅಡಿಟಿಪ್ಪಣಿಗಳು

೧. ಪು. ಸಂ. ೧೨೪, ಸಂ.೧

೨. ಪು. ಸಂ. ೧೬೭, ಸಂ.೧

೩. ಪು. ಸಂ. ೨೧೭, ಸಂ.೧

೪. ಪು. ಸಂ. ೨೩೨, ಸಂ.೧

೫. ಪು. ಸಂ. ೪೧೪, ಸಂ.೧

೬. ಪು. ಸಂ. ೮೮, ಸಂ.೨

೭. ಪು. ಸಂ. ೩೪೮, ಸಂ.೨

೮. ಪು. ಸಂ. ೨೮೩, ಸಂ.೩

೯. ಪು. ಸಂ. ೩೧೦, ಸಂ.೩

೧೦. ಪು. ಸಂ. ೯೨, ಸಂ.೩

೧೧. ಪು. ಸಂ. ೨೮, ಸಂ.೧

**ಸಮಾರೋಪ**

ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳನ್ನು ಅಧ್ಯನಕ್ಕೊಳಪಡಿಸಿ, ಪರಿಶೀಲಿಸಿದ ನಂತರ ಕೆಲವು ವಿಚಾರಗಳು ಸ್ಪಷ್ಟಗೊಂಡಿವೆ. ಸಾಂಸ್ಥಿಕವಾಗಿ, ಸಾಂಘಿಕವಾಗಿ ಜರುಗುವಂತಹ ಈ ಸಾಹಿತ್ಯ ಸಮ್ಮೇಳನಗಳು ಹಲವು ವಿಷಯಗಳನ್ನು ಕುರಿತ ಚರ್ಚೆಗೆ ಒಂದು ವೇದಿಕೆಯನ್ನು ಒದಗಿಸಿಕೊಟ್ಟಿವೆ. ಆರಂಭದಲ್ಲಿ ಈ ವೇದಿಕೆ ನಾಡಿನ ಏಕೀಕರಣಕ್ಕೆ ಹೆಚ್ಚಿನ ಒತ್ತು ಕೊಟ್ಟಿರುವುದು ಕಂಡುಬರುತ್ತದೆ. ತನ್ಮೂಲಕ ಭಾಷಾಭಿವೃದ್ಧಿ, ಸಾಹಿತ್ಯ, ಚರಿತ್ರೆ, ಶಿಕ್ಷಣ, ಪತ್ರಿಕೆ, ಕನ್ನಡಾಭಿಮಾನ ಇತ್ಯಾದಿ ಅಂಶಗಳು ಚರ್ಚಿತ ವಿಷಯಗಳಾಗಿ ಮೂಡಿಬಂದಿವೆ. ಇಂತಹ ವೇದಿಕೆಯಲ್ಲಿ ಕನ್ನಡ ಮತ್ತು ಕರ್ನಾಟಕದ ಕೊರತೆಗಳನ್ನು ತಿಳಿಸುತ್ತ, ಅವರವೇ ಆದಂತಹ ಕೆಲವು ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಉದ್ದೇಶ, ಕಾರ್ಯ, ಅವುಗಳನ್ನು ಜಾರಿಗೊಳಿಸಲು ಯಾವ ರೀತಿಯ ಪ್ರಯತ್ನಗಳನ್ನು ಮಾಡಬೇಕು ಎನ್ನುವುದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಒಟ್ಟಾರೆಯಾಗಿ ಮೊದಲ ಮೂರು ಸಂಪುಟಗಳಲ್ಲಿ ಈ ಎಲ್ಲ ವಿಚಾರಗಳು ಮೂಡಿಬಂದಿರುವುದನ್ನು ಕಾಣಬಹುದು. ಅಧ್ಯಕ್ಷರು ಕನ್ನಡ ಕನ್ನಡಿಗರು ಎನ್ನುವುದನ್ನು ಕೇವಲ ಭಾಷಾವಾಚಿ, ಸಮೂಹವಾಚಿ/ ದೇಶವಾಚಿ ಎನ್ನುವ ಮಾನದಂಡದ ಮೂಲಕವೇ ಚರ್ಚೆಗಳನ್ನು ಮಾಡಿದ್ದಾರೆ. ಈ ಚರ್ಚೆ / ಚಿಂತನೆಗಳಲ್ಲಿ ಅಕ್ಷರ ವಲಯಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಪ್ರತಿಯೊಂದು ಚರ್ಚೆಯ ಭಾಗದಲ್ಲಿಯೂ ಈ ರೀತಿಯ ಅಂಶಗಳನ್ನು ಗುರುತಿಸಬಹುದು. ಸಮ್ಮೇಳನಗಳು ನಾಡಿನಾದ್ಯಂತ, ಹೊರನಾಡುಗಳಲ್ಲಿಯೂ ಜರುಗುತ್ತ ಬಂದಿವೆ. ಇವುಗಳ ಉದ್ದೇಶ ಸಮ್ಮೇಳನಗಳು ಜರುಗುವ ಪ್ರದೇಶ/ಸ್ಥಳದ ಮೂಲಕ ಸಮಸ್ತ ಕನ್ನಡ ಕುಲಕೋಟಿಯನ್ನು ಒಂದೆಡೆಗೆ ತರುವುದು ಆ ಮೂಲಕ ಅವರ ವಿಚಾರಗಳು ಎಲ್ಲರಿಗೂ ಮುಟ್ಟುವಂತೆ ಮಾಡುವುದು. ಈ ಸಂದರ್ಭದಲ್ಲಿ ಸಮ್ಮೇಳನಗಳಲ್ಲಿ ಚರ್ಚಿತವಾಗುವ ವಿಷಯಗಳು ಕೇವಲ ಅಕ್ಷರ ಲೋಕವನ್ನು ಮಾತ್ರ ಗಣನೆಗೆ ತೆಗದುಕೊಂಡ ವಿಷಯಗಳಾಗಿರುತ್ತವೆ. ಆದರೆ ಸಮ್ಮೇಳನದ ದಿನವೇ, ಸಮ್ಮೇಳನ ಜರುಗುವ ಸ್ಥಳ/ಪ್ರದೇಶದ ದುಡಿಯುವ ಬಹುಸಂಖ್ಯಾತ ಜನರು ಇದರ ಬಗ್ಗೆ ಗಮನ ಕೊಡಲಾರದಂತಹ ಸ್ಥಿತಿ ಇದೆ. ಅವರಿಗೆ ಈ ಸಮ್ಮೇಳನ ಮುಖ್ಯ ಎಂತಲೂ ಅನಿಸುವುದಿಲ್ಲ. ಅಷ್ಟಕ್ಕೂ ಅವರ ಬಗ್ಗೆ ಯಾವ ವಿಚಾರಗೂ ಚರ್ಚೆಯಾಗುವುದಿಲ್ಲ, ಅವರ ಸಮಸ್ಯೆಗಳಿಗೆ ಸ್ಪಂದಿಸುವುದಿಲ್ಲ. ನಾಡಿಗೆ ಅನ್ನದಾತರಾದ ರೈತರ ಬಗ್ಗೆ, ಶೋಷಣೆಗೊಳಗಾದವರ ಬಗ್ಗೆ ಎಲ್ಲಿಯೂ ಚರ್ಚೆಗಳು ಮೂಡಿಬಂದಿಲ್ಲ. ಇನ್ನೊಂದು ವಿಚಾರವನ್ನು ಈ ಅಧ್ಯಯನದ ಮೂಲಕ ಕಂಡುಕೊಂಡದ್ದು ಏನೆಂದರೆ, ಆರಂಭದಿಂದ ಅದುವರೆಗೂ (ಪ್ರಕಟಿತ ಮೂರನೆ ಸಂಪುಟದವರೆಗಿನ ಭಾಷಣಗಳು) ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಸ್ಥಾನವನ್ನು ಯಾವೊಬ್ಬ ಮಹಿಳೆಗೂ ಕೊಡದಿರುವುದು. ಏಕೆಂದರೆ ಪ್ರತಿ ವರ್ಷದ ಸಮ್ಮೇಳನದ ಅಧ್ಯಕ್ಷರ ಸ್ಥಾನ ಯಾರಿಗೆ ಕೊಡಬೇಕು ಎನ್ನುವುದು ಪರಿಷತ್ತೇ ನಿರ್ಣಯಿಸುತ್ತಿತ್ತು ಎನ್ನುವುದು ಸೂಕ್ಷ್ಮವಾಗಿ ಈ ಸಂಪುಟಗಳಲ್ಲಿಯೇ ತಿಳಿದುಬರುತ್ತದೆ. ಅಧ್ಯಕ್ಷರು ತಮ್ಮ ಭಾಷಣದ ಆರಂಬ ಸಂದರ್ಭದಲ್ಲಿನ ಅವರ ಸಂಬೋಧನ ಶೈಲಿಯನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ತಾವು ಅಧ್ಯಕ್ಷ ಸ್ಥಾನಕ್ಕೆ ಅರ್ಹರಲ್ಲ ಎನ್ನುತ್ತಲೇ ಹಲವಾರು ವಿಚಾರಗಳನ್ನು ಚರ್ಚಿಸಿರುವುದು ಕಂಡುಬರುತ್ತದೆ. ಆದರೆ ಮಹಿಳೆಯರ ಕುರಿತು

ಚರ್ಚೆಯಾಗಿರುವ ಸಂದರ್ಭಗಳು ತುಂಬಾ ಕಡಿಮೆ. ಅಲ್ಲೊ ಇಲ್ಲೊ ಎನ್ನುವಂತೆ ಅವರ ಮಾತುಗಳಲ್ಲಿ ಮರೆಯಾಗಿವೆ. ಇಂತಹ ಎಷ್ಟೊ ವಿಷಯಗಳನ್ನು ಅವರು ಕಡೆಗಣಿಸಿದ್ದಾರೆ ಎಂದೇ ಹೇಳಬಹುದು. ಸಾಂಸ್ಥಿಕವಾಗಿ, ಸಾಂಘಿಕವಾಗಿ ನಡೆಯುವ ಈ ಸಾಹಿತ್ಯ ಸಮ್ಮೇಳನಗಳು ಚರ್ಚಿಸಿರುವುದಕ್ಕಿಂತ ಬಹುಪಾಲು ಬಿಟ್ಟಿರುವುದೇ ಹೆಚ್ಚು. ಆದ್ದರಿಂದ ಇಂತಹ ಎಲ್ಲ ಕಡೆಗಣಿಸಲ್ಪಟ್ಟ ವಿಚಾರಗಳನ್ನು ಸಾಹಿತ್ಯ ಸಮ್ಮೇಳನಗಳಲ್ಲಿ ಚರ್ಚಿಸಿದರೆ, ಅವುಗಳಲ್ಲಿನ ಫಲಿತಗಳನ್ನು ಕಾರ್ಯರೂಪಕ್ಕೆ ತಂದರೆ ಸಮ್ಮೇಳನಗಳ ಮಹತ್ವ ಉಳಿಯುತ್ತದೆ ಮತ್ತು ಗಟ್ಟಿಗೊಳ್ಳುತ್ತದೆ.

## ಗ್ರಂಥಋಣ


ಅನಂತರಾಮರಾವ್ ಕೆ, (ಸಂ), ೨೦೦೬, ಕರ್ನಾಟಕ ಸುವರ್ಣ ದರ್ಶನ, ವಿದ್ಯ ಪಬ್ಲಿಷಿಂಗ್ ಹೌಸ್, ಮಂಗಳೂರು

ನಾರಾಯಣ ಕೆ ವಿ, ೨೦೦೭, ಕನ್ನಡ ಜಗತ್ತು: ಅರ್ಧಶತಮಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪಾಟೀಲ ಪುಟ್ಟಪ್ಪ, ೨೦೦೭, ನಾಡು ನುಡಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪುಟ್ಟಯ್ಯ ಬಿ ಎಂ, ಕನ್ನಡ ಅಭಿಮಾನದ ಸಾಮಾಜಿಕ ಆಯಾಮಗಳು (ಅಪ್ರಕಟಿತ ಬರಹ)

ಬರಗೂರು ರಾಮಚಂದ್ರಪ್ಪ, ೨೦೦೭, ಕನ್ನಡ ಪ್ರಜ್ಞೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಲ್ಲೇಪುರಂ ಜಿ ವೆಂಕಟೇಶ್ (ಸಂ), ನಾಡು – ನುಡಿ, ಸಂ. ೨

ರಹಮತ್ ತರೀಕೆರೆ (ಸಂ), ೨೦೦೫, ಕನ್ನಡ ಸಾಹಿತ್ಯ ಮೀಮಾಂಸೆ, ಸಂ. ೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,

ರಹಮತ್ ತರೀಕೆರೆ, ೨೦೦೭, ಕನ್ನಡ ಸಂಶೋಧನೆಯ ತಾತ್ವಿಕ ವಿಚಾರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,

ವಿವಿಧ ಲೇಖಕರು (ಸಂ), ೨೦೦೬, ಕನ್ನಡ – ಕನ್ನಡಿಗ – ಕರ್ನಾಟಕ, ಕನ್ನಡ ಪುಸ್ತಕ ಪ್ರಾಧಿಕಾರ

ಶಿವರುದ್ರಪ್ಪ ಜಿಎಸ್, ೨೦೦೭, ಕನ್ನಡ ಕಾವ್ಯ ತತ್ವ ಚಿಂತನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹರಿಶ್ಚಂದ್ರ ದಿಗ್ಗಂಗಿಕರ್, ೧೯೯೯, ಕನ್ನಡಿಗರ ಗೋವೆ ವಲಸೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷೀಯ ಭಾಷಣಗಳು, (ಮೊದಲ ೩ ಸಂಪುಟಗಳು), ೧೯೭೨,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

